ಶ್ರೀಃ

ಸಟೀಕ

# ವೀರಶೈವ ದೀಕ್ಷಾವಿಧಿಯು

—— :0: ——

ಆಸ್ಥಾನವಿದ್ವಾನ್

ಎಸ್. ಆರ್. ಕರಿಬಸವಶಾಸ್ತ್ರಿಗಳಿಂದ

ಪರಿಷ್ಕರಿಸಿ

ಮುದ್ರಿಸಿ, ಪ್ರಕಟಿಸಲ್ಪಟ್ಟಿತು.

(ತೃತೀಯ ಮುದ್ರಣಂ)



**MYSORE:**

**PRINTED AT "THE S. K. P. PRESS."**

**1921.**





ಕ್ರಯ ೧೪ ಆಣೆ.

ಶ್ರೀಃ

ಸಟೀಕ

# ವೀರಶೈವ ದೀಕ್ಷಾವಿಧಿಯು

:O:

ಆಸ್ಥಾನವಿದ್ವಾನ್

ಎನ್. ಆರ್. ಕರಿಬಸವಶಾಸ್ತ್ರಿಗಳಿಂದ

ಪರಿಷ್ಕರಿಸಿ

ಮುದ್ರಿಸಿ, ಪ್ರಕಟಿಸಲ್ಪಟ್ಟಿತು.

(ತೃತೀಯ ಮುದ್ರಣಂ)

**MYSORE:**

PRINTED AT "THE S. K. P. PRESS."

1921.



ಕ್ರಯ ೧೪ ಆಣೆ.

# ಪೀಠಿಕೆ.

ಲೋಕದಲ್ಲಿ ದುಷ್ಪಾರವಾದ ಸಂಸಾರಸಾಗರವನ್ನು ದಾಟಿ ಮುಕ್ತರಾಗುವುದಕ್ಕೆ ನಾನಾ ಮಾರ್ಗಗಳನ್ನು ಸೂಚಿಸುವುದರಿಂದಲೇ ನಾನಾ ಮತಗಳು ಏರ್ಪಟ್ಟಿವೆ. ವೀರಶೈವಸಿದ್ಧಾಂತಪ್ರಕಾರ ಜೀವನಿಗೆ ಮೋಕ್ಷವು ಆತ್ಮಕರ್ತೃಕವಲ್ಲ. ಶಿವಕರ್ತೃಕವು. ಜೀವಿಗೆ ಕಲಾದಿಯೋಗ, ಕರ್ಮಕ್ಷಯ, ಮಲಪರಿಪಾಕ, ಶಕ್ತಿಪಾತ, ಗುರೂಪಸದನಗಳಾದನಂತರ ಶಿವಶಕ್ತಿರೂಪವಾದ ದೀಕ್ಷೆಯೆಂಬ ಈಶ್ವರಕರಣದಿಂದ ಮುಕ್ತಿವ್ಯಕ್ತಿಲಾಭರೂಪವಾದ ಮೋಕ್ಷವು ಸಿದ್ಧಿಸುವುದು. ಪಶುತ್ವವನ್ನಳಿಯಿಸಿ ಶಿವತ್ವವನ್ನುಂಟುಮಾಡುವ ಈ ದೀಕ್ಷೆಯು ಆತ್ಮನಿಗೂ ಶಿವನಿಗೂ ಸಂಧಾನವನ್ನುಂಟುಮಾಡುವುದರಿಂದ ಇದು ಶಿವನಿಗೆ ಕರಣವಾಗಿರುವುದು. ಯಾವ ಜೀವಿಗೆ ಪುನರಾವೃತ್ತಿರಹಿತ ಶಿವಸಾಯುಜ್ಯಸಿದ್ಧಿಗಾಗಿ ಅವನ ಮೇಲೆ ಶಿವಶಕ್ತಿಪಾತವಾಗಿರುವುದೋ ಅವನಲ್ಲಿ ಮೋಕ್ಷಾಪೇಕ್ಷೆ, ಸಂಸಾರದ್ವೇಷ, ಶಿವಭಕ್ತಪ್ರೀತಿ, ಶಿವಶಾಸ್ತ್ರಶ್ರದ್ಧೆ, ಸದ್ಗುರೂಪಸದನಕಾಂಕ್ಷೆ ಇವೇ ಮೊದಲಾದ ಕುರುಹುಗಳು ವ್ಯಕ್ತವಾಗುವುವು. ಹೀಗೆ ಶಕ್ತಿಪಾತಗೊಂಡ ಜೀವಿಯು ‹‹ಸದೇಶಿಕಮುಪಾಪ್ರಾಪ್ಯ ದೀಕ್ಷಾವಿಚ್ಛಿನ್ನಬಂಧನಃ | ಪ್ರಯಾತಿ ಶಿವಸಾಯುಜ್ಯಂ ನಿರ್ಮಲೋ ನಿರುಪಪ್ಲವಃ›› ಎಂಬ ಸ್ವಾಯಂಭುವಾಗಮವಚನದಂತೆ ಸದ್ಗುರುವನ್ನಾಶ್ರಯಿಸಿ, ಅವನಿಂದ ದೀಕ್ಷಾಸಂಸ್ಕಾರ ಪಡೆದು, ಮಲವಿಮೋಚನೆ ಹೊಂದಿ, ಸಾಯುಜ್ಯವನ್ನೈದುವನು. ಅದು ಕಾರಣ ಇಂತಪ್ಪ ದೀಕ್ಷೆಯಿಂದಲ್ಲದೆ ಮೋಕ್ಷಸಿದ್ಧಿಯಿಲ್ಲವಾದಕಾರಣ ವೀರಶೈವರಲ್ಲಿ ಎಲ್ಲಕ್ಕೂ ಮುಖ್ಯವಾದ ಕರ್ಮವೆಂದರೆ ಇದೊಂದೇ ಸರಿ. ಅನೇಕ ಜನ್ಮಸಿದ್ಧವಾದ ಶಿವಭಕ್ತಿಯಿಂದ ಕರ್ಮಕ್ಷಯಾದಿಗಳನ್ನು ಪಡೆದು, ಚರಮಶರೀರಿತ್ವವನ್ನು ಹೊಂದಿ, ಶಕ್ತಿಪಾತದಿಂದ ಶಿವದೀಕ್ಷೆಯನ್ನು ಪಡೆಯುವುದು ನೂತನವಾಗಿ ವೀರಶೈವ ಧರ್ಮಪ್ರವಿಷ್ಟರಾಗತಕ್ಕವರ ವಿಷಯವು. ವೀರಶೈವದೀಕ್ಷಾಸಂಸ್ಕೃತರಾದ ಮಾತಾಪಿತೃಗಳಿಂದ ಜನಿಸಿದ ಬಾಲಬಾಲೆಯರಲ್ಲಿ ಚರಮಶರೀರಿತ್ವವೂ, ದೀಕ್ಷಾರ್ಹತೆಯೂ ತಾನಾಗಿ ಸಿದ್ಧಿಸಿರುವುದು. ‹‹ಏಕೇನಜನ್ಮನಾಮುಕ್ತಿರ್ವೀರಾಣಾಂತುಮಹೇಶ್ವರಿ›› ಎಂಬ ಶಿವಾಗಮವಚನವು ಅದೇ ಅರ್ಥವನ್ನು ಸ್ಪಷ್ಟಪಡಿಸಿರುವುದು.

‹‹ಅಮೃತಸ್ಯದೇವಧಾರಣೋಭೂಯಾಸಂ›› ‹‹ಸರ್ವಲಿಂಗಗ್ಂ ಸ್ಥಾಪಯತಿ›› ಇತ್ಯಾದಿ ಶ್ರುತಿವಚನಗಳಿಂದ ಪ್ರತಿಪಾದಿತವಾದ ಲಿಂಗಧಾರಣ, ‹‹ಭೂತ್ಯೈನಪ್ರಮದಿತವ್ಯಂ›› ಎಂಬುದೇ ಮೊದಲಾದ ಶ್ರುತಿವಚನಗಳಿಂದ ಪ್ರತಿಪಾದಿ

ತವಾನ ವಿಭೂತಿಧಾರಣ— ಇತ್ಯಾದಿ ವೀರಶೈವ ನಿಯಮಗಳೆಲ್ಲಾ ವೈದಿಕಗಳಾಗಿರುವುದರಿಂದ, ಅವುಗಳ ವಿಧಾಯಕವಾಗಿರುವ ಈ ಶಿವದೀಕ್ಷೆಯೂ ವೈದಿಕವೇ ಆಗಿರುತ್ತದೆ. ಮತ್ತು ಋಗ್ವೇದದಲ್ಲಿ „ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ ಪ್ರಭುರ್ಗಾತ್ರಾಣಿಪರ್ಯೇಷಿವಿಶ್ವತಃ | ಅತಪ್ತತನೂರ್ನತದಾಮೋಽಶ್ನುತೆ |. ಶೃತಾಸಇದ್ವಹಂತಸ್ತತ್ಸಮಾಶತ" ಎಂಬ ವಚನಕ್ಕೆ ಶ್ರೀವೇದವ್ಯಾಸರು (ಬ್ರಹ್ಮೇತಿಲಿಂಗಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ | ಪವಿತ್ರಂತದ್ಧಿವಿಖ್ಯಾತಂ ತತ್ಸಂಪರ್ಕಾತ್ತನುಸ್ಮೃಚಿಃ | ಋಗಿತ್ಯಾಹಪವಿತ್ರಂತೇ ವಿತತಂ ಬ್ರಹ್ಮಣಸ್ಪತೆ | ತಸ್ಮಾತ್ಪವಿತ್ರಂತಲ್ಲಿಂಗಂ ಧಾರ್ಯಂ ಶೈವಮನಾಮಯಂ| ಅತಪ್ತತನುರಜ್ಞೋವೈ ಆಮಸ್ಸಂಸ್ಕಾರವರ್ಜಿತಃ | ದೀಕ್ಷಯಾರಹಿತಸ್ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಂ" ಯಃಕರೋತಿ ತಪಃಪೂರ್ವಂ ಸತಪ್ತತನುರುಚ್ಯತೆ| ಪರಿಪಕ್ವೋವಿಮೋಕ್ಷಾಯ ಸೋಽಶ್ನುತೆ ಲಿಂಗಧಾರಣಂ" ಎಂದು ಮೊದಲಾಗಿ ಅರ್ಥವಿವರಣವನ್ನು ಮಾಡಿ, ಶಿವದೀಕ್ಷೆಯಿಂದ ಮಲತ್ರಯಮುಕ್ತಿಗೊಂಡು ಲಿಂಗಧಾರಣಸಂಪನ್ನನಾದವನೇ ಮುಕ್ತನಾಗುವನೆಂದು ಹೇಳಿರುವ ಪ್ರಕಾರಕ್ಕೆ ಈ ಪ್ರತ್ಯಕ್ಷ ಶ್ರುತಿವಚನದಿಂದಲೂ ವಿಹಿತವಾಗಿರುವಕಾರಣ, ದೀಕ್ಷಾಕರ್ಮವು ವೈದಿಕವೆಂಬುದು ನಿಸ್ಸಂದಿಗ್ಧವಾಗಿದೆ.

ಈ ದೀಕ್ಷೆಯು ಸಾಧಾರದೀಕ್ಷೆ ನಿರಾಧಾರದೀಕ್ಷೆ ಎಂದು ೨ ತೆರವು. ಆಚಾರ್ಯಪರಿಮುಖದಿಂದಲ್ಲದೆ ಕೇವಲ ಶಿವನ ಪರಿಮುಖದಿಂದಲೇ ತೀವ್ರಶಕ್ತಿಪಾತವಾಗಿ ಬಸವೇಶ್ವರನಿಗೆ ಸಂಗಮನಾಥನು ಬಂದೆಸಗಿದಂತೆ ಮಾಡಲ್ಪಡುವ ದೀಕ್ಷೆಯು ನಿರಾಧಾರದೀಕ್ಷೆಯೆನಿಸಿಕೊಳ್ಳುತ್ತದೆ. ಗುರುಮೂರ್ತಿಯನ್ನಾಶ್ರಯಿಸಿ ತನ್ಮುಖೇನ ಮಂದಶಕ್ತಿನಿಪಾತಗೊಂಡು ಪಡೆಯತಕ್ಕದೇ ಸಾಧಾರದೀಕ್ಷೆ. ಆ ಸಾಧಾರದೀಕ್ಷೆಯು ಸಬೀಜದೀಕ್ಷೆ, ನಿರ್ಬೀಜದೀಕ್ಷೆ ಎಂದು ಎರಡುಪ್ರಕಾರ. ಸಬೀಜದೀಕ್ಷೆಯು ಕೇವಲ ಚಿತ್ತಪರಿಪಾಕಗೊಂಡ ಸಮರ್ಥರಾದ ವಿರಾಗಿಗಳಿಗೂ ಜ್ಞಾನಿಗಳಿಗೂ ಅರ್ಹವಾದುದು. ನಿರ್ಬೀಜದೀಕ್ಷೆಯು ಸಮಯಾಚಾರವನ್ನನುಸರಿಸಿ ಬಾಲವೃದ್ಧಾದಿಗಳಿಗೆ ಮಾಡಲ್ಪಡತಕ್ಕದು. ಆ ಸಬೀಜದೀಕ್ಷೆಯಲ್ಲಿ ಶಿವಧರ್ಮಿಣೀದೀಕ್ಷೆ, ಲೋಕಧರ್ಮಿಣೀದೀಕ್ಷೆ ಎಂದು ೨ ತೆರನುಂಟು. ನಿರ್ಬೀಜದೀಕ್ಷೆಯಲ್ಲಿ ಸದ್ಯೋನಿರ್ವಾಣದ ದೀಕ್ಷೆ, ಚಿರನಿರ್ವಾಣದ ದೀಕ್ಷೆ ಎಂದು ೨ ತೆರನುಂಟು. ಮೊದಲನೆಯ ಶಿವಧರ್ಮಿಣೀದೀಕ್ಷೆಯು ಲೌಕಿಕ ಧರ್ಮಾಧರ್ಮಸಂಬಂಧವಿಲ್ಲದೆ ಕೇವಲ ಶಿವಾಯತ್ತಜ್ಞಾನಾಚರಣೆಯುಳ್ಳುದು. ೨ನೆಯ ಲೋಕಧರ್ಮಿಣೀದೀಕ್ಷೆಯು ಶಿವಧರ್ಮಾಚರಣೆಯೊಡನೆ ತದವಿರುದ್ಧವಾದ ಲೌಕಿಕ ಧರ್ಮಾಚರಣೆಯಿಂದಲೂ ಕೂಡಿರತಕ್ಕದು. ಸದ್ಯೋನಿರ್ವಾಣದದೀಕ್ಷೆಯು ಅತಿ

ತೀವ್ರಪಾತದಿಂದ ದೇಹಾದಿಜುಗುಪ್ಸೆಗೊಂಡು ಅತ್ಯಂತ ವಿರಕ್ತರಾಗಿರುವವರಿಗೆ ಮಾಡಲ್ಪಡತಕ್ಕುದೂ, ಥಟ್ಟನೆ ಮುಕ್ತಿಕೊಡತಕ್ಕುದೂ ಆಗಿರುವುದು. ಚಿರನಿರ್ವಾಣದೀಕ್ಷೆಯು ಪ್ರಾರಬ್ಧಕರ್ಮಭೋಗಾನಂತರದಲ್ಲಿ ಮುಕ್ತಿಯನ್ನು ಕೊಡತಕ್ಕುದಾಗಿ ಬಾಲಕಾದಿಗಳಿಗೆ ಮಾಡಲ್ಪಡತಕ್ಕುದಾಗಿರುವುದು. ಈ ಗ್ರಂಥಸ್ಥವಾದ ಪ್ರಯೋಗವಾದರೊ ಸಾಧಾರವೂ, ನಿರ್ಬೀಜವೂ, ಚಿರನಿರ್ವಾಣಪ್ರದವೂ ಆದ ದೀಕ್ಷೆಯ ಸಂಬಂಧವಾದುದೆಂದು ಅರಿಯಬೇಕು. ಈ ದೀಕ್ಷೆಯಲ್ಲಿ ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣದೀಕ್ಷೆ, ಕಲಶಾಭಿಷೇಕದೀಕ್ಷೆ, ಭೂತಿಪಟ್ಟದೀಕ್ಷೆ, ಆಯತ್ತದೀಕ್ಷೆ, ಸ್ವಾಯತದೀಕ್ಷೆ ಎಂದು ಸಪ್ತಭಾಗಗಳುಂಟು. ಅವೆಲ್ಲಾ ಈ ವಿಧಿಯಲ್ಲೇ ವರ್ಣಿತವಾಗಿವೆ. ಆದ್ಯಂತದೀಕ್ಷೆಯೂ ವೇಧಾ, ಮನು, ಕ್ರಿಯೆ ಎಂಬ ಮುಖ್ಯಭಾಗತ್ರಯವುಳ್ಳುದಾಗಿದೆ. ಗುರುವರನು ಶಿಖಾಚಕ್ರದ ಚಿತ್ಕಲೆಯನ್ನು ತನ್ನ ಹಸ್ತಕ್ಕೆ ಆಕರ್ಷಿಸಿ ತಂದು ಅದನ್ನು ಶಿಷ್ಯನ ಮಂಡೆಯಮೇಲಿಟ್ಟು, ಭಾವಲಿಂಗವನ್ನು ಕಾರಣತನುವಿನಲ್ಲಿ ನೆಲೆಗೊಳಿಸುವುದೇ ವೇಧಾದೀಕ್ಷೆಯು. ಕರ್ಣದಲ್ಲಿ ಮಂತ್ರೋಪದೇಶವನ್ನು ಮಾಡಿ ಪ್ರಾಣಲಿಂಗವನ್ನು ಸೂಕ್ಷ್ಮದೇಹದಲ್ಲಿ ಸ್ಥಾಪಿಸುವುದೇ ಮನುದೀಕ್ಷೆಯು. ಸ್ಥೂಲದೇಹದಲ್ಲಿ ಇಷ್ಟಲಿಂಗಧಾರಣೆ ಮಾಡುವುದೇ ಕ್ರಿಯಾದೀಕ್ಷೆಯು. „ಕುಂಡಮಂಟಪಹೋಮಾದ್ಯೈರ್ನ್ಯಾಸೈರಧ್ವಕಲಾದಿಭಿಃ | ಮಂತ್ರೋಪದೇಶಸಹಿತಾ ಕ್ರಿಯಾದೀಕ್ಷೇತಿ ಗೀಯತೇ" ಎಂಬ ವಾತುಲಾಗಮ ವಚನಪ್ರಕಾರ ಈ ದೀಕ್ಷೆಗೆ ಕ್ರಿಯಾದೀಕ್ಷೆಯೆಂದೂ ವ್ಯವಹಾರವುಂಟು. ದೀಕ್ಷೆಯಿಂದ ಶಿವತ್ವವನ್ನು ಪಡೆದಾತನು „ನಾಶಿವಶ್ಶಿವಮರ್ಚಯೇತ್" ಎಂಬ ಪ್ರಮಾಣದ ಪ್ರಕಾರ ಶಿವಾರ್ಚನ ಯೋಗ್ಯತಾಸಂಪನ್ನನಾಗಿ ಕ್ರಮೇಣ „ಧಾರಯಂತೋನರಾಸ್ಸ್ಥೂಲಂ ಕಾರಣಂ ಸಂಪ್ರಯಾಂತಿಹಿ" ಎಂಬ ಪ್ರಮಾಣದಂತೆ ಸ್ಥೂಲಲಿಂಗಧಾರಣಾರ್ಚನಾದಿಗಳಿಂದ ಅಂತರ್ಲಿಂಗಾನುಸಂಧಾನಸಾಮರ್ಥ್ಯವನ್ನು ಪಡೆದು, ರಸಸಿದ್ಧವಾದ ತಾಮ್ರವು ಹೊನ್ನಾಗಿಬಿಟ್ಟು ಪುನಃ ತಾಮ್ರವು ಹೇಗಾಗುವುದಿಲ್ಲವೋ ಹಾಗೆ „ಶಿವತ್ವಂ ಸಚಹೀಯೇತ ವಿಮುಕ್ತೋ ದೀಕ್ಷಯಾ ಭವೇತ್" ಎಂಬ ಪ್ರಮಾಣವಚನದಂತೆ ಶಿವತ್ವವನ್ನು ಬಿಟ್ಟು ಮರಳಿ ಜೀವತ್ವವನ್ನು ಪಡೆಯುವುದಿಲ್ಲ. ಎಂದರೆ ವಿಮುಕ್ತನಾಗುತ್ತಾನೆ. ಹೀಗೆ ಮಲತ್ರಯ ವಿನಾಶಮಾಡಿ ಜ್ಞಾನಸಂಬಂಧವನ್ನಿತ್ತು ಮುಕ್ತಿಯನ್ನುಂಟುಮಾಡಿಸುವುದಾದಕಾರಣ „ದೀಯತೆ ಜ್ಞಾನಸಂಬಂಧಃ ಕ್ಷೀಯತೇಚ ಮಲತ್ರಯಂ | ದೀಯತೆ ಕ್ಷೀಯತೆ ಯೇನ ದೀಕ್ಷೇತ್ಯೇವಾಸಿಬಧ್ಯತೇ" ಎಂಬ ಪ್ರಮಾಣವಚನದಂತೆ ಇದಕ್ಕೆ ದೀಕ್ಷೆಯೆಂಬ ಹೆಸರು ಸಾರ್ಥಕವಾಗಿರುವುದು.

ಈ ದೀಕ್ಷಾಕರ್ಮವನ್ನು "ಗರ್ಭಾಷ್ಟಮೇಕೃತಾದೀಕ್ಷಾ ಮುಖ್ಯಾ ಸಾ ಷೋಡಶಾವಧಿ | ಗೌಣಾ ತದೂರ್ಧ್ವಮಧಮಾ ವೀರಶೈವಾನ್ಸವಾಯಿನಾಂ" ಎಂಬ ಶಿವಾಗಮವಾಕ್ಯದಂತೆ ವೀರಶೈವರಿಗೆ ೮ನೆ ವರ್ಷ ವಯಸ್ಸಿನಲ್ಲೇ ಮಾಡುವುದು ಮುಖ್ಯವು. ಅದನ್ನು ಬಿಟ್ಟು ೧೬ ವರ್ಷದೊಳಗೆ ಮಾಡುವುದು ಗೌಣ ಪಕ್ಷವು. ಅದನ್ನೂ ಮೀರಿ ಮಾಡುವುದು ಅಧಮವು. ಇದರಂತೆಯೇ ಸ್ತ್ರೀಯರಿಗೂ ದೀಕ್ಷಾಕರ್ಮವು ಅವಶ್ಯಕವು. ಆದರೆ ಕೆಲವರು ಜನನವಾದ ೧೧ನೆ ದಿವಸದಲ್ಲಿ ಸಾಮಾನ್ಯವಾಗಿ ಮಾಡಿರತಕ್ಕ ಲಿಂಗಧಾರಣವೇ ಸ್ತ್ರೀಯರಿಗೆ ಸಾಕೆಂದು ತಿಳಿದಿರುವರು, ಇದು ಶುದ್ಧ ಅಸಂಗತ. ಭವಿತ್ವವು ಉಂಟಾಗದೆ ಇರುವುದಕ್ಕಾಗಿ ಮಾಡಿದ ಆ ಸಾಮಾನ್ಯದೀಕ್ಷೆಯು ವಿಶೇಷ ದೀಕ್ಷೆಯಂತೆ ಕಾರ್ಯಕಾರಿಯಲ್ಲ. ಷಡಧ್ವಶೋಧನಪೂರ್ವಕವಾಗಿ ಮಾಡತಕ್ಕ ಈದೀಕ್ಷೆಯುಕೂಡ ವಿಶೇಷ ವೀರಶೈವರಾದ ಸಕಲಸ್ತ್ರೀಪುರುಷರಿಗೂ ಅತ್ಯವಶ್ಯಕವಾದುದು.

ಈ ದೀಕ್ಷಾಕ್ರಮವು ಅನೇಕ ಶಿವಾಗಮಗಳಲ್ಲಿ ಹೇಳಲ್ಪಟ್ಟಿದೆ. ಅವುಗಳಿಂದ ಸಂಗ್ರಹಿಸಿ ಶ್ರೀಬಸವ ಶಿವಾಚಾರ್ಯರಿಂದ ಸಂಸ್ಕೃತದಲ್ಲಿ ಬರೆಯಲ್ಪಟ್ಟಿದ್ದ ವಿಧಿಯನ್ನು ಕನ್ನಡಿಗರಾದ ವೀರಶೈವರೆಲ್ಲರೂ ತಿಳಿದುಕೊಳ್ಳುವಂತೆ ಮಾಡುವುದಕ್ಕಾಗಿ ಮಂತ್ರವನ್ನು ಬಿಟ್ಟು ಉಳಿದ ತಂತ್ರವನ್ನೆಲ್ಲ ಕನ್ನಡದಲ್ಲಿ ಟೀಕಿಸಿ, ಮಂತ್ರಗಳನ್ನೆಲ್ಲಾ ಚೆನ್ನಾಗಿ ಪರಿಶೋಧಿಸಿ, ಈ ವಿಧಿಯು ಮುದ್ರಿಸಲ್ಪಟ್ಟಿರುತ್ತದೆ. ಇದಲ್ಲದೆ ಪೌರೋಹಿತ್ಯವನ್ನು ಮಾಡಿಸುವವರೂ ಇತರ ಕರ್ಮಠರೂ ಸಹ ಅವಶ್ಯಕವಾಗಿ ತಿಳಿದುಕೊಳ್ಳಬೇಕಾದ ಕೆಲ ವಿಶೇಷ ವಿಷಯಗಳು (ಪ್ರಾಣಾಯಾಮಾದಿ ಲಕ್ಷಣಗಳು) ಆದಿಭಾಗದಲ್ಲೇ ಸೇರಿಸಲ್ಪಟ್ಟಿವೆ. ಈ ವಿಶೇಷ ವಿಷಯಗಳು ವಾತುಲಾಗಮ, ಪಾರಮೇಶ್ವರಾಗಮ, ಯೋಗಜಾಗಮ, ಮಂತ್ರರಹಸ್ಯ, ಮಂತ್ರದೇವತಾಪ್ರಕಾಶಿಕೆ, ಪ್ರಪಂಚಸಾರ, ಮಂತ್ರಮಹೋದಧಿ, ಲಿಂಗಪುರಾಣ, ಅಗ್ನಿಪುರಾಣ, ಸಿದ್ಧಾಂತಶೇಖರ, ಕ್ರಿಯಾಸಾರ, ವೀರಶೈವಾಚಾರಕೌಸ್ತುಭ ಮುಂತಾದ ಗ್ರಂಥಗಳಿಂದ ಸಂಗ್ರಹಿಸಲ್ಪಟ್ಟಿವೆ. ಆಯಾ ಪ್ರಮಾಣಗಳನ್ನೇ ಸಂಸ್ಕೃತದಲ್ಲೂ ಯಥಾವತ್ತಾಗಿ ವಿಸ್ತರಿಸಿದರೆ ಗ್ರಂಥಬಾಹುಳ್ಯವುಂಟಾಗುವುದೆಂದು ಅವುಗಳ ತಾತ್ಪರ್ಯಮಾತ್ರ ಬರೆಯಲ್ಪಟ್ಟಿದೆ.

ಯಸ್. ಆರ್. ಕರಿಬಸವಶಾಸ್ತ್ರಿ,

ಆಸ್ಥಾನವಿದ್ವಾನ್.

# ವಿಶೇಷ ವಿಷಯಗಳು.

ಪ್ರಾಣಾಯಾಮವು:—ಪ್ರಾಣಶಬ್ದಕ್ಕೆ ತನ್ನ ದೇಹದಲ್ಲಿ ಹುಟ್ಟಿದ ವಾಯುವೆಂದರ್ಥ; ಯಮಶಬ್ದಕ್ಕೆ ಅದನ್ನು ತಡೆಯುವಿಕೆಯೆಂದರ್ಥ; ಏತೇನ ಪ್ರಾಣಾಪಾನವಾಯುಗಳನ್ನು ತಡೆಯುವುದೇ ಪ್ರಾಣಾಯಾಮವೆನಿಸಿಕೊಳ್ಳುವುದು. ಇದು ಪೂರಕ, ಕುಂಭಕ, ರೇಚಕವೆಂದು ತ್ರಿವಿಧವು. ಬಲಗೈಯ ಕನಿಷ್ಠ ಅನಾಮಿಕೆ ಹೆಬ್ಬೆರಲು ಈ ಮೂರು ಬೆರಳುಗಳಿಂದ ಮೂಗಿನ ಎಡಬಲ ರಂಧ್ರಗಳನ್ನು ಅದಿಮಿ ಹಿಡಿದು ಮೊದಲು ಬಲಗಡೆಯ ಮೂಗಿನ ರಂಧ್ರದಿಂದ ಒಳಗಣ ವಾಯುವನ್ನು ಹೊರಕ್ಕೆ ಬಿಟ್ಟು (ರೇಚಿಸಿ) ಬಳಿಕ ಅ ಉ ಮ ಕಾರಾತ್ಮಕವಾದ ಪ್ರಣವದ ಆದಿಯ ಬ್ರಹ್ಮಾಧಿದೈವತಾಕವಾದ ಅಕಾರವನ್ನು ಧ್ಯಾನಿಸುತ್ತಾ ಚಂದ್ರಾಂಶಕವಾದ ಇಡಾನಾಡಿಯಿಂದ (ಎಡಗಡೆಯ ಮೂಗಿನ ರಂಧ್ರದಿಂದ) ಹೊರಗಣ ವಾಯುವನ್ನು ಮೇಲಕ್ಕೆ ಆಕರ್ಷಿಸಿ ತುಂಬುವುದು ಪೂರಕವು. ವಿಷ್ಣ್ವಧಿದೇವತಾಕವಾದ ಉಕಾರವನ್ನು ಧ್ಯಾನಿಸುತ್ತಾ ಅಗ್ನಿಯಂಶವಾದ ಸುಷುಮ್ನಾನಾಡಿಯಲ್ಲಿ (ಮೂಗಿನ ನಡುನಾಡಿಯಲ್ಲಿ) ಸಂಪೂರ್ಣ ಕುಂಭದಂತೆ ವಾಯುವನ್ನು ಚಲನೆಗೊಳಿಸದೆ ತಡೆಯುವುದೇ ಕುಂಭಕವು. ರುದ್ರಾಧಿದೇವತಾಕವಾದ ಮಕಾರವನ್ನು ಧ್ಯಾನಿಸುತ್ತಾ ಸೂರ್ಯಾಂಶಕವಾದ ಪಿಂಗಳಾನಾಡಿಯಿಂದ (ಮೂಗಿನ ಬಲಗಡೆಯ ರಂಧ್ರದಿಂದ) ವಾಯುವನ್ನು ಹೊರಕ್ಕೆ ಹೊರಡಿಸುವುದೇ ರೇಚಕವು. ಹೀಗೆ ೩ನ್ನೂ ಒಂದಾವೃತ್ತಿ ಮಾಡಿದರೆ ಒಂದು ಪ್ರಾಣಾಯಾಮವೆನಿಸಿಕೊಳ್ಳುವುದು. ಮೇಲೆ ಹೇಳಿದಂತೆ ಪ್ರಣವದಿಂದ ಅಭ್ಯಸಿಸುವುದು ಒಂದುವಿಧ. ಪ್ರತ್ಯೇಕವಾಗಿ ಒಂದೊಂದಾವೃತ್ತಿ ಸವ್ಯಾಹೃತಿ ಸಪ್ರಣವವಾದ (ಓಂ ಭೂಃ ಎಂಬುವದೇ ಮೊದಲಾದುದರಿಂದ ಕೂಡಿದ) ಗಾಯತ್ರೀ ಮಂತ್ರವನ್ನುಚ್ಚರಿಸಿ ಪೂರಕ, ಕುಂಭಕ, ರೇಚಕಗಳನ್ನು ಮಾಡುವುದು ಮತ್ತೊಂದು ವಿಧ. ಈ ಪ್ರಾಣಾಯಾಮವು ಸಗರ್ಭವೆಂತಲೂ ಅಗರ್ಭವೆಂತಲೂ ಎರಡುವಿಧ. ಮಂತ್ರ ಜಪ ಧ್ಯಾನದಿಂದ ಕೂಡಿದರೆ ಸಗರ್ಭವು; ತದ್ವಿಹೀನವಾದರೆ ಅಗರ್ಭವೆನಿಸಿಕೊಳ್ಳುವುದು. ಪೂರಕಾದಿಗಳೊಂದೊಂದನ್ನು ೧೨ ಮಾತ್ರಾಕಾಲಿಕಗಳನ್ನಾಗಿ ಮಾಡುವುದು ಕನಿಷ್ಠಪ್ರಾಣಾಯಾಮವು; ೨೪ ಮಾತ್ರಾಕಾಲಿಕವಾದರೆ ಮಧ್ಯಮವು; ೩೬ ಮಾತ್ರಾಕಾಲಿಕವಾದರೆ ಉತ್ತಮವೆನ್ನಿಸಿಕೊಳ್ಳುವುದು. ಸಾಧಕರು ಮೊದಲು ೧೨ ಮಾತ್ರಾಕಾಲಿಕವಾಗಿ ಆರಂಭಿಸಿ ಕ್ರಮೇಣ ವೃದ್ಧಿಗೊಳಿಸಬೇಕು. ೧೨ ಮಾತ್ರಾಕಾಲಿಕವಾಗಿ ೩ನ್ನೂ ಒಂದಾವೃತ್ತಿ ಮಾಡಿದರೆ ಅದಕ್ಕೆ ಒಂದು ಉದ್ಘಾತವೆಂದು ಹೆಸರು. ಕುಂಭಕವನ್ನು ಮಾತ್ರ ೧೨ ಮಾತ್ರಾಕಾಲಿಕವಾಗಿ ಮಾಡಿ, ಪೂರಕ ರೇಚಕಗಳನ್ನು ಸಾಧ್ಯವಾದಷ್ಟು ಕಾಲದಲ್ಲಿ ಮಾಡಿದರೂ ಮಾಡಬಹುದೆಂಬುದೂ ಒಂದು ಪಕ್ಷವು. ಮಂಡಿಯಮೇಲೆ ಎಡಗೈಯ ತರ್ಜನೀಬೆರ

ಲಿನಿಂದ ಅತಿ ವೇಗವೂ ಅತಿ ಸಾವಕಾಶವೂ ಇಲ್ಲದೆ ಒಂದಾವೃತ್ತಿ ಸುತ್ತಿ ಒಂದು ಚಿಟುಂಕಿಯನ್ನು ಹಾಕುವಷ್ಟು ಕಾಲಕ್ಕೆ ಒಂದು ಮಾತ್ರಾಕಾಲವೆಂದು ಹೆಸರು. ಸಿದ್ಧಾಂತಶೇಖರಾದಿ ಕೆಲವು ಗ್ರಂಥಗಳಲ್ಲಿ ೩ ಚಿಟುಂಕಿಗಳನ್ನು ಹಾಕುವಷ್ಟು ಕಾಲಕ್ಕೆ ಒಂದು ಮಾತ್ರಾಕಾಲವೆಂದು ಹೇಳಲ್ಪಟ್ಟಿದೆ. ಮೇಲೆ ಕಂಡಂತೆ ಪ್ರಾಣಾಯಾಮವನ್ನು ಅಭ್ಯಸಿಸುವುದರಿಂದ ಸಾಧಕನಿಗೆ ದೇಹದಲ್ಲಿ ಕನಿಷ್ಠಪ್ರಾಣಾಯಾಮದಿಂದ ಬೆವರು ಹುಟ್ಟುವುದೂ, ಮಧ್ಯಮದಿಂದ ನಡುಗುವಿಕೆಯೂ, ಉತ್ತಮವಿಧಾನದಿಂದ ತಾನಾಗಿ ದೇಹದ ಉತ್ಥಾನವೂ ಸಮನಿಸಿದರೆ ಕ್ರಮಾಭ್ಯಾಸವೆನಿಸಿಕೊಳ್ಳುವುದು. ಇದಕ್ಕಿಂತಲೂ ಉತ್ತಮೋತ್ತಮಾಭ್ಯಾಸವೂ ಬೇರೆ ಇರುವದು. ಈ ಪ್ರಾಣಾಯಾಮದಿಂದ ಮನೋವಾಕ್ಕಾಯಜಗಳಾದ ಸಕಲ ದೋಷಗಳೂ ನಾಶಗೊಂಡು, ದಿವ್ಯಶಾಂತ್ಯಾದಿಗಳು ಅಳವಟ್ಟು, ಕೊನೆಗೆ ಶಿವ ಸಾಯುಜ್ಯವು ಲಭಿಸುವುದು. ಪ್ರಾಣಾಯಾಮವೆಂಬುದು ಯೋಗದಲ್ಲಿ ಒಂದಂಗವು. ಇದರ ವಿಷಯವು ಇನ್ನೂ ಬಹು ವಿಸ್ತಾರವಾಗಿರುವುದು. ಅದನ್ನೆಲ್ಲಾ ಶಾಸ್ತ್ರವೇದಿಯಾದ ಗುರುಮುಖದಿಂದ ಕ್ರಮವಾಗಿ ಅರಿತು ಸಾಧಿಸುವುದು ಸಾಧಕನಿಗೆ ಶ್ರೇಯಸ್ಕರವು.

## ನ್ಯಾಸಲಕ್ಷಣವು

ನ್ಯಾಸವು— ಕರನ್ಯಾಸ ದೇಹನ್ಯಾಸ ಅಂಗನ್ಯಾಸವೆಂದು ಮೂರು ವಿಧವು. ಇವುಗಳಲ್ಲಿ ಕರನ್ಯಾಸ-ದೇಹನ್ಯಾಸಗಳು ಪ್ರತ್ಯೇಕವಾಗಿ ಸೃಷ್ಟಿ ಸ್ಥಿತಿ ಸಹ್ಮಾರವೆಂದು ಮೂರು ಮೂರು ಪ್ರಕಾರಗಳಾಗಿರುವುವು. ಅಂಗನ್ಯಾಸವಾದರೊ ಒಂದೇ ವಿಧವಾಗಿರುವುದು. ಸಾಧಕನು ಮೊದಲು ಕರನ್ಯಾಸವನ್ನೂ, ಬಳಿಕ ದೇಹನ್ಯಾಸವನ್ನೂ, ತದನಂತರ ಅಂಗನ್ಯಾಸವನ್ನೂ ಮಾಡಬೇಕು. ಇವುಗಳಲ್ಲಿ ಕರನ್ಯಾಸಲಕ್ಷಣವು ಕೆಲಕೆಲವು ಗ್ರಂಥಗಳಲ್ಲಿ ಒಂದೊಂದು ವಿಧವಾಗಿ ಹೇಳಲ್ಪಟ್ಟಿರುವುದು. ಪಾರಮೇಶ್ವರಾಗಮದಲ್ಲಿ— ಅಂಗುಷ್ಠಾಂಗುಲಿ ಮೊದಲಾಗಿ ಕನಿಷ್ಠಾಂಗುಲಿ ಕಡೆಯಾಗಿ ಮಾಡುವುದು ಸೃಷ್ಟಿ; ಮಧ್ಯಮ, ಅನಾಮಿಕೆ, ಕನಿಷ್ಠಿಕ, ಅಂಗುಷ್ಠ, ತರ್ಜನಿ ಈ ರೀತಿಯಾಗಿ ಮಾಡುವುದು ಸ್ಥಿತಿ; ಕನಿಷ್ಠಾದಿ ಅಂಗುಷ್ಠಾಂತವಾದರೆ ಸಹ್ಮಾರನ್ಯಾಸವು; ಇವುಗಳಲ್ಲಿ ಗೃಹಸ್ಥನು ಸೃಷ್ಟಿಕ್ರಮದಿಂದಲೂ, ಬ್ರಹ್ಮಚಾರಿಯು ಸ್ಥಿತಿಮಾರ್ಗದಿಂದಲೂ, ಸನ್ಯಾಸಿಯು ಸಹ್ಮಾರರೀತಿಯಿಂದಲೂ ನ್ಯಾಸಮಾಡಬೇಕೆಂದು ಹೇಳಿದೆ. ವ್ಯಾಸೋಕ್ತವಾದ ಲಿಂಗಪುರಾಣದಲ್ಲಿ— ಬಲಗೈಯ ಅಂಗುಷ್ಠಾದಿಯಾಗಿ ಎಡಗೈಯ ಅಂಗುಷ್ಠವು ಕಡೆಯಾಗಿ ನ್ಯಾಸಮಾಡುವುದು ಸೃಷ್ಟಿ; ಇದಕ್ಕೆ ವ್ಯತ್ಯಸ್ತವಾಗಿ ಎಂದರೆ ಎಡಗೈಯ ಅಂಗುಷ್ಠಾದಿಯಾಗಿ, ಬಲಗೈಯ ಅಂಗುಷ್ಠವು ಕಡೆಯಾಗಿ ಮಾಡುವುದು ಸಹ್ಮಾರ; ಎರಡು ಕಯ್ಗಳಲ್ಲೂ ಒಂದೇಆವೃತ್ತಿ ಅಂಗುಷ್ಠಾದಿ ಕನಿಷ್ಠಾಂತವಾಗಿ ಮಾಡಿದರೆ ಸ್ಥಿತಿನ್ಯಾಸವು; ಇವುಗಳಲ್ಲಿ ಬ್ರಹ್ಮಚಾರಿಗೆ ಸೃಷ್ಟಿ; ಗೃಹಸ್ಥನಿಗೆ ಸ್ಥಿತಿ; ಸನ್ಯಾಸಿಗೆ ಸಹ್ಮಾರವೆಂದು ಹೇಳಲ್ಪಟ್ಟಿದೆ. ಯೋಗಬಾಗ

ಮದಲ್ಲಿ—ಅಂಗುಷ್ಠಾದಿ ಕನಿಷ್ಠಾಂತವಾದರೆ ಸೃಷ್ಟಿ; ಕನಿಷ್ಠಾದಿ ಅಂಗುಷ್ಠಾಂತ ವಾದರೆ ಸಹ್ಮಾರ; ಬಲಗೈಯಲ್ಲಿ ಅಂಗುಷ್ಠಾದಿಯಾಗಿ ಎಡಗೈಯಲ್ಲಿ ಕನಿಷ್ಠಾದಿ ಯಾಗಿ ಒಂದೇ ಆವೃತ್ತಿ ಮಾಡಿದರೆ ಸ್ಥಿತಿ; ಇವುಗಳಲ್ಲಿ ಗೃಹಸ್ಥನಿಗೆ ಸೃಷ್ಟಿ; ಬ್ರಹ್ಮಚಾರಿಗೆ ಸ್ಥಿತಿ; ವಾನಪ್ರಸ್ಥ ಸನ್ಯಾಸಿ ವಿಧುರ ಮುಂತಾದವರಿಗೆ ಸಹ್ಮಾರನ್ಯಾಸವೆಂದು ಉಕ್ತವಾಗಿರುವುದು. ನಿಜಗುಣಶಿವಯೋಗಿಗಳು—ಅಂಗುಷ್ಠಾದಿಕನಿಷ್ಠಾಂತವಾದರೆ ಸೃಷ್ಟಿ; ಕನಿಷ್ಠಾದಿ ಅಂಗುಷ್ಠಾಂತವಾದರೆ ಸಹ್ಮಾರ; ಮಧ್ಯಮ, ತರ್ಜನಿ, ಅಂಗುಷ್ಠ, ಕನಿಷ್ಠ, ಅನಾಮಿಕೆ ಈರೀತಿಯಾದರೆ ಸ್ಥಿತಿಯೆಂತಲೂ, ಗೃಹಸ್ಥನಿಗೂ, ಮುತ್ತೈದೆಗೂ, ವಿಧವೆಗೂ ಸ್ಥಿತಿನ್ಯಾಸವು. ಬ್ರಹ್ಮಚಾರಿಗೆ ಉತ್ಪತ್ತಿಯು. ವಾನಪ್ರಸ್ಥ ಸನ್ಯಾಸಿಗಳಿಗೆ ಸಹ್ಮಾರನ್ಯಾಸವು ಎಂದು ಹೇಳಿರುತ್ತಾರೆ. ಹೀಗೆಯೇ ವಾತುಲಾಗಮ, ಪ್ರಪಂಚಸಾರ, ಮಂತ್ರರಹಸ್ಯ, ಮಂತ್ರದೇವತಾಪ್ರಕಾಶಿಕೆ, ಮಂತ್ರಮಹೋದಧಿ ಮುಂತಾದ ಗ್ರಂಥಗಳಲ್ಲೆಲ್ಲಾ ಸ್ವಲ್ಪಸ್ವಲ್ಪ ವ್ಯತ್ಯಾಸವಾಗಿ ಹೇಳಲ್ಪಟ್ಟಿದೆ. ಇದಲ್ಲದೆ ಬೀಜಾಕ್ಷರಗಳೂ ಕೂಡ ಸೃಷ್ಟಿ, ಸ್ಥಿತಿ, ಸಂಹಾರ ರೂಪಗಳಿಂದ ವ್ಯತ್ಯಸ್ತಗಳಾಗುವುವೆಂದು ನಿಜಗುಣ ಶಿವಯೋಗಿಗಳು ಹೇಳಿರುತ್ತಾರೆ. ಹೇಗೆಂದರೆ—ಯಕಾರಾದಿ ಸಕಾರಾಂತವಾದರೆ ಸೃಷ್ಟಿ, ಸಕಾರಾದಿ ಯಕಾರಾಂತವಾದರೆ ಸಹ್ಮಾರ, ಶಿಕಾರಾದಿ ಮಕಾರಾಂತವಾದರೆ ಸ್ಥಿತಿ, ಯೆಂಬುದಾಗಿ. ಈ ಪ್ರಕಾರವಾದ ಬೀಜಾಕ್ಷರವ್ಯತ್ಯಯವು ಇವರು ಹೇಳಿರುವ ಗ್ರಂಥದಲ್ಲಲ್ಲದೆ, ಇನ್ನಾವ ಗ್ರಂಥದಲ್ಲೂ ಕಾಣಲಿಲ್ಲ. ಕರನ್ಯಾಸವನ್ನು ಮಾಡುವಾಗ್ಗೆ ಪ್ರತಿಯಂಗುಲಿಗಳಲ್ಲೂ ಇರುವ ಮೂರು ಮೂರು ಪರ್ವಗಳ ಆದ್ಯಂತ ಪರ್ವಗಳಲ್ಲಿ ಪ್ರಣವವನ್ನೂ, ಮಧ್ಯಪರ್ವಗಳಲ್ಲಿ ಬಿಂದುಸಹಿತವಾದ ಆಯಾ ಬೀಜಾಕ್ಷರಗಳನ್ನೂ ನ್ಯಾಸಮಾಡಬೇಕು. ಪ್ರತಿಯೊಂದು ವಿಧದ ನ್ಯಾಸದಲ್ಲೂ ಅಂಗುಲಿಗಳ ಬುಡದ ಪರ್ವದಿಂದ ಆರಂಭಿಸಬೇಕು ಎಂದು ಅನೇಕ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ. ನಿಜಗುಣ ಶಿವಯೋಗೀಂದ್ರರಾದರೊ ಸೃಷ್ಟಿಗೆ ಮೂಲಪರ್ವದಿಂದ ಅಗ್ರಪರ್ವದವರೆಗೆ; ಸಹ್ಮಾರಕ್ಕೆ ಅಗ್ರದಿಂದ ಮೂಲದವರೆಗೆ; ಸ್ಥಿತಿಗೆ ಮಧ್ಯ, ಆದಿ, ಅಗ್ರ, ಈ ಕ್ರಮದಿಂದ ನ್ಯಾಸಮಾಡಬೇಕೆಂದು ಹೇಳಿದ್ದಾರೆ. ಅಂಗುಷ್ಠದ ಬೆರಳಿನಲ್ಲಿ ತರ್ಜನಿಯ ಅಗ್ರದಿಂದಲೂ, ಉಳಿದ ನಾಲ್ಕು ಅಂಗುಲಿಗಳಲ್ಲೂ ಅಂಗುಷ್ಠದ ಅಗ್ರದಿಂದಲೂ, ನ್ಯಾಸಮಾಡಬೇಕು.

ದೇಹನ್ಯಾಸವು:—ಶಿರಸ್ಸು, ಮುಖ, ಕಂಠ, ಹೃದಯ, ಗುಹ್ಯ, ಪಾದ ಈ ಸ್ಥಲಗಳಲ್ಲಿ ಕ್ರಮವಾಗಿ ಆಯಾ ಬೀಜಾಕ್ಷರಗಳನ್ನು ಪ್ರಣವಸಹಿತವಾಗಿ ನ್ಯಾಸ ಮಾಡುವುದು ಸೃಷ್ಟಿ; ಪಾದಾದಿಮೂರ್ಧಪರ್ಯಂತವಾದರೆ ಸಹ್ಮಾರ; ಹೃದಯ, ಗುಹ್ಯ, ಪಾದ, ಶಿರಸ್ಸು, ಮುಖ, ಕಂಠ ಈ ಕ್ರಮವಾಗಿ ನ್ಯಾಸಮಾಡುವುದು ಸ್ಥಿತಿಯೆನಿಸಿಕೊಳ್ಳುವುದು. ಇದರಲ್ಲೂ, ಪ್ರಣವಾದಿ ಷಡಕ್ಷರಗಳನ್ನು ಮೊದಲು ತಿಳಿಸಿದಂತೆ ಬೀಜಾಕ್ಷರವ್ಯತ್ಯಯವನ್ನು ಮಾಡಿ ನ್ಯಾಸ ಮಾಡತಕ್ಕದು ನಿಜಗುಣರ ಪಕ್ಷವು.

ಬಳಿಕ ಪ್ರಣವಾದಿ ಷಡಕ್ಷರಗಳನ್ನು ಹೃದಯಾದಿ ಸ್ಥಲಗಳಲ್ಲಿ ಸಶಿರಸ್ಕ ವಾಗಿ ನ್ಯಾಸ ಮಾಡುವುದೇ ಅಂಗನ್ಯಾಸವು; (ದೇಹನ್ಯಾಸ ಅಂಗನ್ಯಾಸಗಳಲ್ಲಿ ಉಪಯೋಗಿಸತಕ್ಕ ಆಯಾ ಅಂಗುಲಿಗಳ ವಿವೇಚನವು ಮುಂದೆ ವಿಧಿಯಲ್ಲಿ ಅಧ್ವ ಶೋಧನಗೊಳಿಸುವಾಗ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.)

ಈ ಮೇಲೆ ಕಂಡಂತೆ ನ್ಯಾಸರೀತಿಗಳು ಅನೇಕ ಗ್ರಂಥಗಳಲ್ಲಿ ನಾನಾವಿಧ ವಾಗಿ ಹೇಳಲ್ಪಟ್ಟಿವೆ. ಆದರೆ ಆಯಾ ಆಶ್ರಮಿಗಳು ಆಯಾ ಉಕ್ತಗಳಾದ ನ್ಯಾ ಸಗಳನ್ನೇ ಮಾಡಬೇಕೆಂದು ವೀರಶೈವರಿಗಾಗಿ ವಿಧಿಸಿದಂತೆ ಯಾವ ನಮ್ಮ ಮ ತಗ್ರಂಥದಲ್ಲೂ ತಿಳಿಸಲ್ಪಟ್ಟಿಲ್ಲ. ನೀಲಕಂಠ ಶಿವಾಚಾರ್ಯ ವಿರಚಿತವಾದ ‹ಕ್ರಿಯಾ ಸಾರ› ವೆಂಬ ಉದ್ಗ್ರಂಥದಲ್ಲಿ ಈ ವಿಷಯವಾಗಿ ಗಳನೆ ಉಪದೇಶದಲ್ಲಿ ಹೇಳಿ ರುವುದೇನೆಂದರೆ—ವೀರಶೈವರಿಗೆ ದೀಕ್ಷೆಯಾಗತಕ್ಕ ಕಾಲದಲ್ಲಿ ಆಚಾರ್ಯನಿಂದ ಯಾವ ರೀತಿಯಲ್ಲಿ ಸಕಲೀಕರಣ (ಕರನ್ಯಾಸಾಂಗನ್ಯಾಸವು) ಮಾಡಲ್ಪಟ್ಟಿರು ವುದೋ ಅದೇ ರೀತಿಯನ್ನೇ ಅವರುಗಳು ಸದಾ ಅನುಸರಿಸಬೇಕು. ಇತರರುಗ ಳಾದರೊ ತಾತ್ಕಾಲಿಕವಾಗಿ (ತಮ್ಮ ಆಶ್ರಮಕ್ಕೆ ತಕ್ಕ) ನ್ಯಾಸರೀತಿಯನ್ನು ಅನುಸರಿಸಬೇಕು, ಎಂಬುದು. ಇದಲ್ಲದೆ ವೀರಶೈವರು ತ್ರಿವಿಧನ್ಯಾಸದಲ್ಲಿ ತಮಗೆ ಇಷ್ಟವಾದುದು ಯಾವುದನ್ನಾದರೂ ನಿಯಮದಿಂದ ಆಚರಿಸಬಹುದೆಂದೂ ಉ ಕ್ತವಾಗಿದೆ. ಅದುಕಾರಣ ವೀರಶೈವರು ಮೇಲೆ ಹೇಳಿದ ಭೇದಗಳಲ್ಲಿ ಗುರುಮು ಖದಿಂದ ತಮಗೆ ಯಾವ ರೀತಿಯು ಅನುಗ್ರಹಿಸಲ್ಪಡುವುದೋ ಅಥವಾ ತಮಗೆ ಯಾವುದು ಅಭಿರುಚಿಸುವುದೋ ಅದನ್ನು ಸರಿಯಾಗಿ ದೃಢಪ್ರತ್ಯಯದಿಂದ ಆಚ ರಿಸುವುದೇ ಉಚಿತವೆಂದು ತೋರುತ್ತದೆ.

## ಮುದ್ರಾಲಕ್ಷಣವು.

ಮಂತ್ರಸಿದ್ಧಿಯನ್ನಪೇಕ್ಷಿಸುವವನಿಗೆ ಮುದ್ರಾಲಕ್ಷಣ ಜ್ಞಾನವು ಅತ್ಯವ ಶ್ಯಕವು. ಇದನ್ನು ತಿಳಿಯದೆ ಇದ್ದವನಿಗೆ ಮಂತ್ರಶಕ್ತಿಯುಂಟಾಗುವುದಿಲ್ಲ. ವಾತುಲಾಗಮಾದಿ ಮಂತ್ರಶಾಸ್ತ್ರಗಳಿಂದ ಸಂಗ್ರಹಿಸಿ, ಇಲ್ಲಿ ವಿಸ್ತರಿಸಲ್ಪಟ್ಟಿದೆ.

ಆವಾಹಿನೀಮುದ್ರೆ— ಎರಡು ಹಸ್ತಗಳನ್ನೂ ಅಂಜಲಿಯಾಗಿ ಮಾಡಿ, ಅನಾಮಿಕೆಯ ಬೆರಲುಗಳ ಬುಡದ ಪರ್ವಗಳಲ್ಲಿ ಹೆಬ್ಬೆರಲುಗಳ ತುದಿಯನ್ನು ಇಟ್ಟು ಹಿಡಿಯುವುದು. ಸ್ಥಾಪಿನೀಮುದ್ರೆ—ಮೇಲ್ಕಂಡ ರೀತಿಯ ಹಸ್ತವನ್ನೇ ಅಧೋ ಮುಖ ಮಾಡುವುದು. ಸನ್ನಿಧಾಪಿನೀ—ಎರಡು ಹಸ್ತಗಳ ಹೆಬ್ಬೆರಲನ್ನೂ ಮೇಲ ಕ್ಕೆ ನಿಲ್ಲಿಸಿ, ಬೇರೆಬೇರೆ ಮುಷ್ಟಿಯನ್ನು ಹಿಡಿದು ಸಂಯೋಜಿಸುವುದು. ಸಂರೋ ಧಿನೀ—ಹೆಬ್ಬೆರಲನ್ನು ಮೇಲೆ ಬಿಡದೆ ಮುಷ್ಟಿಯೊಳಗಡೆ ಸೇರಿಸಿ ಹಿಡಿಯುವುದು. ಸಮ್ಮುಖೀಕರಣೀ—ಅಂತಹ ಮುಷ್ಟಿಗಳನ್ನು ಅಂಗತಾಕನಾಗಿ ಮಾಡಿ ಹಿಡಿಯು ವುದು. ಅವಕುಂಠಿನೀ—ಒಲಗಯ್ಯನ್ನು ಮುಷ್ಟಿ ಮಾಡಿ ಅಧೋಮುಖಗೊಳಿಸಿ ತರ್ಜನಿಯನ್ನು ಉದ್ದವಾಗಿ ನೀಡಿ, ಆ ಬೆರಲನ್ನು ಎಡಗಯ್ಯಲ್ಲಿ ಸೂಂಕಿಸಿ, ಸು

ತ್ತಲೂ ತಿರುಗಿಸುವುದು. (ಇವೇ ಷಣ್ಮುದ್ರೆಗಳು) ಅಲ್ಲದೆ ವರಮುದ್ರೆ—ಹಸ್ತ ವನ್ನು ವಿಸ್ತರಿಸಿ ಚಾಚುವುದು. ಅಂಕುಶಮುದ್ರೆ—ನಡುಬೆರಲನ್ನು ಉದ್ದವಾಗಿ ನೀಡಿ ಅದರ ಮಧ್ಯಪರ್ವದೊಡನೆ ತರ್ಜನಿಯ ಮಧ್ಯಪರ್ವವನ್ನು ಸೇರಿಸಿ, ಆ ತರ್ಜನಿಯನ್ನು ಮಾತ್ರ ಸ್ವಲ್ಪ ಬಗ್ಗಿಸುವುದು. ಮಹಾಮುದ್ರೆ—ಎರಡು ಕಯ್ಗಳ ಹೆಬ್ಬೆರಲನ್ನೂ ಒಂದಕ್ಕೊಂದನ್ನು ತಗಲಿಸಿ ಹಿಡಿದು ಉಳಿದ ಬೆರಲುಗಳನ್ನೆಲ್ಲಾ ಬಿಟ್ಟು ವಿಸ್ತರಿಸುವುದು. ಗಂಧಮುದ್ರೆ—ಕಿರುಬೆರಲಿನ ಬುಡದಲ್ಲಿ ಹೆಬ್ಬೆರಲನ್ನು ಸೇರಿಸುವುದು. ಪುಷ್ಪಮುದ್ರೆ—ಹೆಬ್ಬೆರಲುಗಳ ಬುಡದಲ್ಲಿ ತರ್ಜನಿಗಳನ್ನು ಸೇರಿ ಸುವುದು. ಧೂಪಮುದ್ರೆ—ತರ್ಜನಿಗಳ ಬುಡದಲ್ಲಿ ಹೆಬ್ಬೆರಲನ್ನು ಸೇರಿಸುವುದು. ದೀಪಮುದ್ರೆ—ನಡುಬೆರಲಿನ ಬುಡದಲ್ಲಿ ಹೆಬ್ಬೆರಲನ್ನು ಸಂಯೋಗಿಸುವುದು. ನಮ ಸ್ಕಾರಮುದ್ರೆ—ಎರಡು ಕಯ್ಗಳನ್ನೂ ಜೋಡಿಸಿ, ಬೆರಲುಗಳನ್ನು ಮೇಲುಮುಖ ಮಾಡಿ ಹೃದಯಪ್ರದೇಶದಲ್ಲಿ ಇಟ್ಟುಕೊಳ್ಳುವುದು. ತಾಳಮುದ್ರೆ—ಹಸ್ತಗಳನ್ನು ಒಂದರಿಂದೊಂದನ್ನು ಹೃದಯಪ್ರದೇಶದಲ್ಲಿ ತಾಡಿಸುವುದು. ಲಿಂಗಮುದ್ರೆ—ಬಲ ಗಯ್ಯನ್ನು ಮುಷ್ಟಿ ಮಾಡಿ ಹೆಬ್ಬೆರಲನ್ನು ಮಾತ್ರ ಮೇಲಕ್ಕೆ ಬಿಟ್ಟು ಆ ಮುಷ್ಟಿಯ ನ್ನು ಎಡಗಯ್ಯಿಂದ ಸುತ್ತಿ ಹಿಡಿಯುವುದು. ಸಹಸ್ರಾರಮುದ್ರೆ—ಎಡಗಯ್ಯನ್ನು ಅಧೋಮುಖಮಾಡಿ, ಅದರಲ್ಲಿ ಬಲಗಯ್ಯನ್ನು ಮೇಲ್ಮುಖ ಮಾಡಿ, ಎಲ್ಲಾ ಬೆರ ಲುಗಳಿಂದಲೂ ಸೇರಿಸಿ ಹಿಡಿದು ಸುತ್ತಿಸುವುದು. ಪದ್ಮಮುದ್ರೆ—ಬೆರಲುಗಳನ್ನೆ ಲ್ಲಾ ನೀಡಿ ಹೆಬ್ಬೆರಲುಗಳನ್ನು ಮಾತ್ರ ಒಳಕ್ಕೆ ಸೇರಿಸಿ ಎರಡು ಮುಂಗಯ್ಗಳ ನ್ನೂ ಕೂಡಿಸುವುದು. ಬ್ರಹ್ಮಮುದ್ರೆ—ಎಡಗಯ್ಯಿನಮೇಲೆ ಬಲಗಯ್ಯನ್ನಿಟ್ಟು, ಒಂದರ ಸಂದಿನಲ್ಲೊಂದುಬೆರಲನ್ನು ಸೇರಿಸಿ, ಹಸ್ತಗಳ ಪೃಷ್ಠಭಾಗವನ್ನು ಬಲ ವಾಗಿ ಹಿಡಿಯುವುದು. ಕೂರ್ಮಮುದ್ರೆ— ಎಡಗಯ್ಯಿನ ಮೇಲೆ ಬಲಗಯ್ಯನ್ನು ಇಟ್ಟು, ಆಯಾ ಬೆರಲುಗಳಿಂದ ಆಯಾ ಬೆರಲುಗಳನ್ನು ಕ್ರಮವಾಗಿ ಜೋಡಿಸಿ ರುವುದು. ಅಸ್ತ್ರಮುದ್ರೆ— ಬಲಗಯ್ಯಿನ ಅಂಗುಷ್ಠ ಅನಾಮಿಕೆಗಳನ್ನು ಸೇರಿಸಿ ಮುಖದಲ್ಲಿಡುವುದು. ತತ್ವಮುದ್ರೆ—ಬಲಗಯ್ಯಿನ ಹೆಬ್ಬೆರಲು ತರ್ಜನಿಗಳನ್ನು ಸೇ ರಿಸಿ ಹಿಡಿಯುವುದು (ಇದಕ್ಕೆ ಜ್ಞಾನಮುದ್ರೆಯೆಂತಲೂ ಹೆಸರು) ಕುರಂಗಮು ದ್ರೆ—ಹೆಬ್ಬೆರಲಿನ ತುದಿಯಲ್ಲಿ ಮಧ್ಯಮ ಅನಾಮಿಕೆಗಳ ಅಗ್ರಗಳನ್ನು ಸೇರಿಸಿ, ತರ್ಜನಿ ಕನಿಷ್ಠಿಕೆಗಳನ್ನು ಮೇಲಕ್ಕೆ ನೀಡಿರುವುದು. ಚೂಚುಕಮುದ್ರೆ—ಐದು ಬೆರಲುಗಳ ತುದಿಯನ್ನೂ ಒಟ್ಟುಗೂಡಿಸಿರುವುದು.

ಹೀಗೆಯೇ ಇನ್ನೂ ಅನೇಕ ಮುದ್ರೆಗಳ ಲಕ್ಷಣವು ಹೇಳಲ್ಪಟ್ಟಿದೆ. ಸಾ ಧಾರಣವಾಗಿ ವಿಧಾನಗಳನ್ನು ನಡೆಯಿಸುವಾಗ್ಗೆ ವ್ಯವಹರಣೆಗೆ ಬೇಕಾದ ಕೆಲವು ಮಾತ್ರ ಇಲ್ಲಿ ಉದಹರಿಸಲ್ಪಟ್ಟಿವೆ.

## ಜಪಲಕ್ಷಣವು.

ಮಾಲಿಕಾಮೂಲಕವಾಗಿ ಮಾಡತಕ್ಕ ಮಂತ್ರಜಪವು ಮುದ್ರಿತವಾಗಿರ ತಕ್ಕ ಕ್ರಿಯಾಸಾರಾದಿ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಮಾಲಿಕೆ

ಯಿಂದಲೇ ಜಪವನ್ನು ಸದಾ ಮಾಡುವುದಕ್ಕೆ ಅನುಕೂಲವಿಲ್ಲದೆ ಇರತಕ್ಕವರು ಅನೇಕರಿರುವುದರಿಂದ ಅಂಥವರಿಗೆ ಅಂಗುಲೀಜಪವು ಅವಶ್ಯಕವಾಗಿ ತಿಳಿಯತಕ್ಕದಾಗಿರುವುದು. ಮಾಲಿಕೆಯಿಲ್ಲದಿದ್ದರೆ ಅಂಗುಲಿಗಳಿಂದಲೇ ಜಪಿಸುವುದೂ ಅಥವಾ ಅಂಗುಲಿಗಳ ರೇಖೆಯಿಂದ ಜಪಿಸುವುದೂ ಉಂಟು. ಅಂಗುಲಿಗಳಿಂದ ಜಪಿಸುವಿಕೆಯು ಮಾಲಿಕಾಜಪಕ್ಕೆ ಸಮಾನವು. ರೇಖೆಯಿಂದ ಜಪಿಸೋಣವು ಅದಕ್ಕಿಂತ ೮ ಪಾಲು ಹೆಚ್ಚಾದ ಫಲವನ್ನು ಕೊಡುವುದೆಂದು ಮಂತ್ರರಹಸ್ಯವೆಂಬ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಅದುಕಾರಣ ರೇಖಾಜಪವೇ ಉತ್ತಮವೆಂದು ಗ್ರಹಿಸಬಹುದು. ಮಧ್ಯಮ, ಅನಾಮಿಕೆ ಈ ೨ ಬೆರಲುಗಳ ಮಧ್ಯಪರ್ವಗಳೆರಡನ್ನೂ ಮೇರುವನ್ನಾಗಿ ಕಲ್ಪಿಸಿ, ತತ್ಪ್ರದಕ್ಷಿಣಾಕಾರವಾಗಿ ಅನಾಮಿಕಾಂಗುಲಿಯ ಬುಡದ ರೇಖೆಯಿಂದಾರಂಭಿಸಿ, ಮಧ್ಯಮಾಂಗುಲಿಯ ಬುಡದ ರೇಖೆಯಲ್ಲಿ ಅಂತ್ಯಗೊಳಿಸುವುದು ೧ ವಿಧ. ಕನಿಷ್ಠಾಂಗುಳಿಯ ಅಧೋರೇಖೆಯಿಂದಾರಂಭಿಸಿ, ಅನಾಮಿಕಾಂಗುಲಿಯ ಬುಡದ ರೇಖೆಯಲ್ಲಿ ಅಂತ್ಯಗೊಳಿಸುವುದು ಮತ್ತೊಂದು ವಿಧ. ಮಧ್ಯಮಾಂಗುಲಿಯ ಊರ್ಧ್ವರೇಖೆಯಿಂದಾರಂಭಿಸಿ, ಅನಾಮಿಕೆಯ ಊರ್ಧ್ವರೇಖೆಗೆ ಅಂತ್ಯಗೊಳಿಸುವುದು ಮತ್ತೊಂದು ವಿಧ. ಅಂತೂ ಈ ಅಂಗುಲಿಗಳಿಂದ ಒಂದು ಪ್ರದಕ್ಷಿಣೆಗೆ ೧೨ ರಂತೆ ೯ ಪ್ರದಕ್ಷಿಣೆಗಳನ್ನು ಮಾಡುವುದೊಂದು ರೀತಿ. ನಾಲ್ಕೇ ಅಂಗುಲಿಗಳಲ್ಲಿ ದಶರೇಖೆಗಳನ್ನು ಅಂಗುಷ್ಠಾಗ್ರದಿಂದ ಸ್ಪರ್ಶಿಸಿ ಆವೃತ್ತಿಯೊಂದಕ್ಕೆ ೧೦ರಂತೆ ಗಣಿಸುವುದೊಂದುರೀತಿ. ಜಪಿಸುವಾಗ ಅಂಗುಲಿಗಳನ್ನು ಒಂದಕ್ಕೊಂದಕ್ಕೆ ಸಂದುಬಿಡದಂತೆ ಸೇರಿಸಬೇಕು. ಹಾಗೆ ಸೇರಿಸದೆ ಇದ್ದರೆ ಆ ರಂಧ್ರಗಳಲ್ಲಿ ಜಪದ ಫಲವು ಸ್ರವಿಸಿಹೋಗುವುದು. ಮತ್ತು ಜಪಿಸುವಾಗ್ಗೆ ಬೆರಲುಗಳೆಲ್ಲವನ್ನೂ ಸ್ವಲ್ಪ ಬಗ್ಗಿಸಿರಬೇಕು. ಹೀಗೆ ಸಹಸ್ರವೋ ಅಥವಾ ೧೦೮ನ್ನೋ ಗೊತ್ತುಮಾಡಿಕೊಂಡು ಗಣನೆಯು ಹೆಚ್ಚುಕಡಮೆಯಾಗದಂತೆ ಮೂರ್ತಿಧ್ಯಾನಪೂರ್ವಕವಾಗಿ ಮಂತ್ರವನ್ನು ಜಪಿಸಬೇಕು. ಈ ಜಪವು ವಾಚಕ, ಉಪಾಂಶು, ಮಾನಸವೆಂದು ಮೂರುವಿಧ. ಪಕ್ಕದಲ್ಲಿರುವ ಜನರಿಗೆ ಮಾತ್ರ ಕೇಳುವಂತೆ ಮಂತ್ರೋಚ್ಚಾರಣೆ ಮಾಡುವುದು ವಾಚಕ. ಪಕ್ಕದಲ್ಲಿರುವವರಿಗೂ ಕೇಳಿಸದಂತೆ ತುಟಿಗಳನ್ನು ಅಳ್ಳಾಡಿಸುತ್ತ ಉಚ್ಚರಿಸುವುದು ಉಪಾಂಶು. ತುಟಿಗಳನ್ನು ಅಳ್ಳಾಡಿಸದೆ ಮನಸ್ಸಿನಲ್ಲೇ ಜಪಿಸುವುದು ಮಾನಸವು. ಇವುಗಳಲ್ಲಿ ವಾಚಕಕ್ಕಿಂತಲೂ ಉಪಾಂಶುವು ಶ್ರೇಷ್ಠವು. ಅದಕ್ಕಿಂತಲೂ ಮಾನಸವು ಶ್ರೇಷ್ಠವು.

ದೀಕ್ಷಾಮಂಟಪಲಕ್ಷಣವು—ಒಳಗೆ ಇದ್ದಲು ಬತ್ತದ ಹೊಟ್ಟು ಮೂಳೆ ಮೊದಲಾದುವುಗಳಿಲ್ಲದಿರತಕ್ಕ ಶುದ್ಧ ಭೂಮಿಯಮೇಲೆ ೯ ಅಥವಾ ೭ ಇಲ್ಲವೆ ೫ ಮೊಳಗಳ ಅಗಲವೂ, ಅಷ್ಟಷ್ಟೇ ಉದ್ದವೂ, ೮ ಮೊಳದ ಎತ್ತರವೂ ಇರತಕ್ಕ ಚಚ್ಚೌಕನಾದ ಮಂಟಪವು ೧೬ ಅಥವಾ ೧೨ ಕಂಬಗಳುಳ್ಳುದಾಗಿರಬೇಕು. ನಾಲ್ಕುಕಡೆಗೂ ದ್ವಾರವಿಡಬೇಕು. ಅದರ ಮಧ್ಯದಲ್ಲಿ ಪಂಚಕಲಶಸ್ಥಾಪನೆಗಾಗಿ

೧೨ ಅಂಗುಲದ ಅಗಲವೂ ಉದ್ದವೂ ಉಳ್ಳ ಚತುಷ್ಕೋಣವಾದ ಜಗತಿಯನ್ನು ಹಾಕಿ, ನಾಲ್ಕು ಕಂಬಗಳ ಸಣ್ಣ ಮಂಟಪವೊಂದನ್ನು ರಚಿಸಬೇಕು. ತೆಂಗಿನ ಗರಿಗಳನ್ನು ಸುತ್ತಲೂ ಮೇಲೂ ಆಚ್ಛಾದಿಸಿ, ಮೇಲುಕಟ್ಟಿನಿಂದಲೂ ಹಾಲುಮರದ ತೋರಣಗಳಿಂದಲೂ, ಬಾಳೆಕಂಬಗಳು, ಪುಷ್ಪಮಾಲಾ ದರ್ಭಮಾಲೆಗಳು, ಧ್ವಜಪಟಗಳು, ಗಂಟೆಗಳು, ಕನ್ನಡಿಗಳು, ಚಾಮರಗಳು ಇವುಗಳಿಂದೆಲ್ಲಾ ಅಲಂಕರಿಸಿ ಧೂಪದಿಂದ ಸುವಾಸಿತಗೊಳಿಸಬೇಕು.

ಪಂಚಕಲಶಸ್ಥಾಪನ—ಮಧ್ಯದ ಸಣ್ಣ ಮಂಟಪದ ಜಗತಿಯನ್ನು ಷಡ್ಗವ್ಯಗಳಿಂದ ಸಾರಿಸಿ, ರಂಗವಲ್ಲಿಯಿಂದ ೯ ಕೋಣಗಳಾಗುವಂತೆ ಬರೆದು, ನಾಲ್ಕು ಮೂಲೆಯ ಕೋಣಗಳನ್ನು ಬಿಟ್ಟು, ಉಳಿದ ೫ ಸ್ಥಾನಗಳಲ್ಲಿ ಪಂಚವರ್ಣದ ರಂಗವಲ್ಲಿಗಳಿಂದ ಅಷ್ಟದಳ ಕಮಲಗಳನ್ನು ರಚಿಸಬೇಕು. ಕಲಶಪ್ರಮಾಣವು ಹೇಗೆಂದರೆ—ಬುಡವು ೧ ಅಂಗುಲದ ಎತ್ತರ, ಹೊಟ್ಟೆ ಎತ್ತರ ೧೨ ಅಂಗುಲ, ಕಂಠವು ೧ ಅಂಗಲದ ದಪ್ಪ, ಮುಖಭಾಗವು ೨ ಅಂಗುಲದಗಲವಾಗಿ ಶಿರಸ್ಸು ವಿಸ್ತರಿಸಿಕೊಂಡು ದುಂಡಾಗಿರಬೇಕು. ಲೋಹಗಳಲ್ಲಿ ಚಿನ್ನ ಬೆಳ್ಳಿ ತಾಮ್ರ ಇವುಗಳದಾಗಲಿ ಅಥವಾ ಮಣ್ಣಿನದಾಗಲಿ ಇರಬೇಕು. ಇವುಗಳಿಗೆ ಸುತ್ತುವ ನೂಲು ೯ ಎಳೆಗಳಾಗಬೇಕು. ಇವಕ್ಕೆ ಉಪಯೋಗಿಸತಕ್ಕುವು ಅರಳಿ ಮಾವು ಹಲಸು ಆಲ ಅತ್ತಿ ಇವುಗಳೇ ೫ ಚಿಗುರುಗಳು, ಇವುಗಳ ತೊಕ್ಕಸಹ. ಕೆಂಪು, ಮುತ್ತು, ವೈಡೂರ್ಯ, ಇಂದ್ರನೀಲ, ಹವಳ ಇವೇ ಪಂಚರತ್ನಗಳು. (ಇವು ದೊರೆಯದಿದ್ದರೆ ಅದಕ್ಕೆ ಪ್ರತಿಯಾಗಿ ಚಿನ್ನ). ಹುತ್ತ, ಒಳಗೆರೆ, ಅಶ್ವಶಾಲೆ ಗಜಶಾಲೆ ಚೇಳುಭೂಮಿ ಇವುಗಳೊಳಗಣ ಮಣ್ಣುಗಳು. ಹೊಂಬಾಳೆ ಗರುಕೆ ವೀಳೆಯದೆಲೆ ಹಾಲಿವಾಣ, ಅರಳಿ ಇವುಗಳ ಚಿಗುರಿನಿಂದಲೂ ಕಲಶಗಳನ್ನಲಂಕರಿಸಬೇಕು. ದರ್ಭಕೂರ್ಚವು ೫೫ ಅಥವಾ ೧೬ ದರ್ಭೆಗಳಿಂದ ಮಾಡಲ್ಪಟ್ಟು ಬುಡವು ಹನ್ನೆರಡಂಗುಲ, ಅಗ್ರವು ನಾಲ್ಕಂಗುಲ ಗಂಟು ೧ ಅಂಗುಲವುಳ್ಳುದಾಗಿರಬೇಕು. ಕಲಶಗಳಿಗೆ ಕೆಳಗೆ ಬರೆದಿರುವ ಕಮಲಗಳೇ ಮನೆ, ಧಾನ್ಯಗಳೇ ಪಾದ, ಅಕ್ಕಿಯೇ ಮಂಡಿಗಳು, ಕೂರ್ಚವೇ ಲಿಂಗವು, ಕಲಶವೇ ದೇಹವು, ವಸ್ತ್ರವೇ ತೊವಲು, ತಂತುವೇ ನಾಡಿಗಳು, ಮೃತ್ತಿಕೆಯೇ ಮಾಂಸವು, ಜಲವೇ ರಕ್ತವು, ಚಿನ್ನವೇ ಪ್ರಾಣವು, ರತ್ನಗಳೇ ಮೂಳೆಗಳು, ತೆಂಗಿನಕಾಯಿಯೇ ಶಿರಸ್ಸು, ಚಿಗುರುಗಳೇ ಕೇಶಗಳು ಆಗಿರುವುವು. ಅದುಕಾರಣ ಇವುಗಳಲ್ಲಿ ಯಾವ ಅಂಗವೂ ನ್ಯೂನವಾಗಕೂಡದು.

ಪಂಚಗವ್ಯಗಳು— ಕೆಂದಹಸುವಿನ ಹಾಲು, ಬಿಳಿಹಸುವಿನ ಮೊಸರು, ಕಪಿಲೆ (ಅಳಗಹಸುವಿನ) ತುಪ್ಪ, ಕಾಳಹಸುವಿನ ಸಗಣಿ ಮತ್ತು ಮೂತ್ರಗಳು, ಇವೇ ಪಂಚಗವ್ಯಗಳು. ಬಡಕಲಾದ ಬಂಜೆಯಾದ ಬಹಳ ಮುದಿಯಾದ ಎಳಗಂತಿಯಾದ ಹಸುವಿನ ಗವ್ಯಗಳನ್ನು ಸ್ವೀಕರಿಸಲಾಗದು.

ದರ್ಭಪವಿತ್ರವು— ಎರಡಂಗುಲದ ಸುತ್ತು, ಒಂದಂಗುಲದ ಗಂಟು, ೪ ಅಂಗುಲದುದ್ದದ ಅಗ್ರವುಳ್ಳುದಾಗಿ ೨ ದರ್ಭೆಗಳಿಂದ ಮಾಡಿರಬೇಕು.

ಶಿವಲಿಂಗದ ಪಂಚಸೂತ್ರವು—ಲಿಂಗದ ಸುತ್ತಳತೆಗೆ ಸಮನಾಗಿ ಪೀಠದ ಅಡ್ಡಗಲವೂ ಉದ್ದವೂ ಇರಬೇಕು. ಆ ಸುತ್ತಳತೆಯ ಅರ್ಧದಷ್ಟು ಗೋಮುಖ ದಳತೆಯೂ, ಅದರ ಅರ್ಧದಷ್ಟು ಗೋಮುಖದ ತುದಿಯೂ, ಅದರ ಅರ್ಧದಳ ತೆಯಷ್ಟು ಕಂಠನಾಳವೂ ಇರಬೇಕು.

ಕರಡಿಗೆ—ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಸೀಸ ಮೊದಲಾದ ಲೋಹ ಗಳಲ್ಲಾವುದರಲ್ಲಾದರೂ ಲಿಂಗಾಕಾರ ನಂದಿಯಾಕಾರ ಏಡಿಯಾಕಾರ ಮಾ ವಿನ ಫಲದಾಕಾರ ಕಡಬಿನಾಕಾರ ಬಿಲ್ವಫಲಾಕಾರಗಳಲ್ಲಿ ಮಾಡಿಸಬಹುದು. ಕಂಚಿನ ಕಬ್ಬಿಣದ ಕರಡಿಗೆಯು ಕೂಡದು. ಗಂಧದಮರದ ಕರಡಿಗೆಯು ಆಗಬ ಹುದು. ವಸ್ತ್ರದಲ್ಲಿ ಲಿಂಗವನ್ನು ಧರಿಸಬಹುದು. ಕರಡಿಗೆಗೆ ಒಂದೇ ಮುಚ್ಚಳ ಮೂರುಪಾದಗಳು ಇರಬೇಕು. ಶಿವದಾರವು ಸ್ವರ್ಣಾದಿ ಲೋಹಮಯವಾಗಾ ಗಲಿ ತಂತುಮಯವಾಗಾಗಲಿ ಇರಬಹುದು. ಕರಡಿಗೆಯು ಶಕ್ತಿರೂಪವೂ ದಾರ ವು ಶಿವರೂಪವೂ ಆಗಿರುವುದು. ದೀಕ್ಷಾಕಾಲದಲ್ಲಿ ಈ ಕರಡಿಗೆ ಶಿವದಾರಗಳ ನ್ನೂ ಕೂಡ ಸಂಸ್ಕರಿಸಿ ಧಾರಣ ಮಾಡಿಸಬೇಕು.

ಉಪಚಾರಭೇದಗಳು;— ಪಂಚೋಪಚಾರಕ್ಕೆ—ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ. ಷೋಡಶೋಪಚಾರಕ್ಕೆ— ಆವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನೀಯ, ಸ್ನಾನ, ವಸ್ತ್ರ, ಉಪವೀತ, ಗಂಧ, ಅಕ್ಷತ, ಪುಷ್ಪ, ಧೂಪ, ದೀಪ, ನೈವೇದ್ಯ, ಪ್ರದಕ್ಷಿಣ ನಮಸ್ಕಾರ, ಆತ್ಮಾರೋಪಣ.

ಪಂಚಗವ್ಯ... ಗೋಮಯ, ಗೋಮೂತ್ರ ಗೋದಧಿ, ಗೋಘೃತ, [illegible]
[illegible]

ಶ್ರೀ ಸಾಂಬಶಿವಾಯ ಪರಬ್ರಹ್ಮಣೇನಮಃ.

# ಸಟೀಕ ವೀರಶೈವ ದೀಕ್ಷಾವಿಧಿಃ



## ಕೃಘ್ರಾಣಿ.

ಉಕ್ತಕಾಲೇ ಆಚಾರ್ಯಃ ಪೂರ್ವೇದ್ಯುಃ ಕೃತನಿತ್ಯಕ್ರಿಯಃ ಮಂಗಲಸ್ನಾನಂ ಕೃತ್ವಾ, ಸ್ವಲಂಕೃತೋ, ದರ್ಭಪಾಣಿಃ, ಶುಚಿರ್ಭೂತ್ವಾ, ವಟೋಃ ಪರಿಧಾನಾರ್ಥಂ ಶುಕ್ಲ ಮೀಷದ್ಧೌತಂ ನವಂ ಸದಶಂ ಪರೇಣಾಧೃತಂ ವಸ್ತ್ರಂ, ಉತ್ತರೀಯಾರ್ಥಂಚ ಕಾಷಾಯವಸ್ತ್ರಂ, ಶಿವಲಿಂಗಂ, ಮೌಂಜೀಂ ಮೇಖಲಾಂಚ, ಪಾಲಾಶ ಮವ್ರಣ ಮೃಜಂ ಸೌಮ್ಯದರ್ಶನಂ ವಟೋಃಕೇಶಸಂಮಿತಂ ಸಾಗ್ರಂ ದಂಡಂ, ಕೌಪೀನಂ, ತದ್ಬಂಧನಸೂತ್ರಂ, ಭಿಕ್ಷಾಭಾಜನಂಚ ಸಂಪಾದ್ಯ, ಸ್ವಲಂಕೃತಾಯಾಂ ಗೋಮಯೇನೋಪಲಿಪ್ತಭೂಮೌ ಪ್ರಾಙ್ಮುಖಉಪವಿಶ್ಯ, ದೇಶಕಾಲೌ ಸಂಕೀರ್ತ್ಯ, ,, ದೀಕ್ಷಯಿತ್ವತ್ವಾದಿಸಿದ್ಧಯೆ ಕೃಘ್ರಾಣ್ಯಾಚರಿಷ್ಯೇ ,, ಇತಿ ಸಂಕಲ್ಪ್ಯ, ಏಕಸ್ಮಿನ್ಪಾತ್ರೇ ಯಥಾಶಕ್ತಿ ದ್ರವ್ಯಂ ನಿಧಾಯ, ಮಾಹೇಶ್ವರಸನ್ನಿಧಿಂ ಗತ್ವಾ ,, ಅಶೇಷೇ ಹೇಪರಿಷತ್ ಮದೀಯಾಂ ವಿಜ್ಞಾಪನಾಂ ಅವ

---

### ಮೊದಲನೆದಿವಸ ಮಾಡತಕ್ಕ ಕರ್ಮ.

ಶಿವದೀಕ್ಷಾಕರ್ಮವನ್ನು ನೆರವೇರಿಸಲು ಜೋಯಿಸರು ಲಗ್ನವನ್ನು ನಿಶ್ಚಯಿಸಿರುವ ದಿನಕ್ಕೆ ಹಿಂದಿನ ದಿನದಲ್ಲಿ ಆಚಾರ್ಯನು ನಿತ್ಯಕರ್ಮವನ್ನು ನೆರವೇರಿಸಿ, ಮಂಗಳಸ್ನಾನವನ್ನು ಮಾಡಿ, ಅಲಂಕೃತನಾಗಿ, ಪವಿತ್ರವನ್ನು ಧರಿಸಿ, ಪರಿಶುದ್ಧನಾಗಿ, ದೀಕ್ಷೆಯನ್ನೈದತಕ್ಕ ಹುಡುಗನಿಗೆ ಉಟ್ಟುಕೊಳ್ಳುವುದಕ್ಕಾಗಿ ಶುಭ್ರವಾದ ಸ್ವಲ್ಪ ಒಗೆದಿರುವ ಸೆರಗಿನಿಂದ ಕೂಡಿದ ಮತ್ತೊಬ್ಬರಿಂದ ಹೊದೆಯಲ್ಪಡದಿರುವ ಹೊಸಪಂಚೆಯೊಂದನ್ನೂ, ಹೊದೆದುಕೊಳ್ಳುವುದಕ್ಕಾಗಿ ಕಾವಿಯ ಪಂಚೆಯೊಂದನ್ನೂ, ಶಿವಲಿಂಗವನ್ನೂ ನೊದೆ ಹುಲ್ಲಿನಿಂದ ಮಾಡಿದ ಉಡಿದಾರವನ್ನೂ, ಆ ಹುಡುಗನ ಜುಟ್ಟಿನ ವರೆಗೂ ಉದ್ದಳತೆಯುಳ್ಳುದಾಗಿಯೂ, ಗಾಯವಿಲ್ಲದೆಯೂ, ಡೊಂಕಾಗದೆಯೂ ನೋಡುವುದಕ್ಕೆ ಚೆನ್ನಾಗಿಯೂ ಇರುವ ಅಗ್ರಸಮೇತವಾದ ಮುತ್ತುಗದ ದಂಡವನ್ನೂ, ಕೌಪೀನವನ್ನೂ, ಅದನ್ನು ಕಟ್ಟತಕ್ಕ ದಾರವನ್ನೂ, ಭಿಕ್ಷಾಪಾತ್ರೆಯನ್ನೂ ಸಹ ಸಂಪಾದಿಸಿ, ಚೆನ್ನಾಗಿ ಅಲಂಕೃತವಾಗಿ ಗೋಮಯದಿಂದ ಸಾರಿಸ

ಧಾರ್ಯೆ, ಮಯಾ ಸಮರ್ಪಿತಾಂ ಇಮಾಂ ಸೌವರ್ಣೀಂ ಅಲ್ಪೀಯಸೀಮಪಿ ಯಥೋಕ್ತದಕ್ಷಿಣಾಮಿವ ಸ್ವೀಕೃತ್ಯ, ಮಾಮನುಗೃಹಾಣ ,, ಇತಿ ಮಾಹೇಶ್ವರಾ ಸಂಪ್ರಾರ್ಥ್ಯ, ತತ್ಪಾತ್ರಂ ತತ್ಪುರತಃ ನಿಕ್ಷಿಪೇತ್. ಮಾಹೇಶ್ವರಾಸ್ತು–ಅನುಗೃಹ್ಣಾಮಃ ಇತಿಪ್ರತಿಬ್ರೂಯುಃ.

ತತಃ ಕುಮಾರಸ್ತುತಥೈವ:– ,,ಮಮ ಬಾಲ್ಯೇ ವಯಸಿ ಅಜ್ಞಾನತಃ ಪಿತ್ರಾದ್ಯುಪೇಕ್ಷಯಾಚ ಸಂಭಾವಿತಾನಾಂ ಪಾಪಾನಾಂ ಅಪನೋದನಾರ್ಥಂ ಜನನೀಸ್ತನ್ಯಪಾನ ಸಹಭೋಜನೋಚ್ಛಿಷ್ಟಭೋಜನ ಪರ್ಯುಷಿತಭೋಜನ ನಿಂದಿತಗೃಹಾನ್ನಭೋಜನ ಸಜಾತೀಯ ವಿಜಾತೀಯ ಸಹಚರಕ್ರೀಡಾಸಲ್ಲಾಪ ಅನಿಯತಮೂತ್ರೋತ್ಸರ್ಜನ ತತ್ತತ್ಕಾಲಶೌಚಾಭಾವ ಮೌನಾಭಾವ ಪ್ರಭೃತೀನಾಂ ಸಂಭಾವಿತಾನಾಂ ಪಾಪಾನಾಂ ಅಪನೋದನಾರ್ಥಂ ಯಥಾಶಕ್ತಿ ಸಕ್ಷಿತ್ಯ ಮಾಂ ಅನುಗೃಹ್ಣಂತು ಭವಂತಃ,, ಇತಿ ವದೇತ್ || ಮಾಹೇಶ್ವರಾಃ ,,ಅನುಗೃಹ್ಣಾಮಃ ,, ಇತಿ ಪ್ರತಿಬ್ರೂಯುಃ ||

---

ಲಪಟ್ಟ ಭೂಮಿಯಲ್ಲಿ ಪೂರ್ವಮುಖನಾಗಿ ಕುಳಿತುಕೊಂಡು, ದೇಶಕಾಲಾದಿಗಳನ್ನು ಹೇಳಿ, ತನಗೆ ದೀಕ್ಷೆಯನ್ನು ಮಾಡತಕ್ಕ ತನವು ಸಿದ್ಧಿಸುವುದಕ್ಕಾಗಿ ಕೃಛ್ರವನ್ನಾಚರಿಸುತ್ತೇನೆಂದು ಸಂಕಲ್ಪಿಸಿ, ಒಂದು ತಟ್ಟೆಯಲ್ಲಿ ತನ್ನ ಶಕ್ತ್ಯನುಸಾರವಾಗಿ ದ್ರವ್ಯವನ್ನಿಟ್ಟು, ಮಾಹೇಶ್ವರರ ಸಮೀಪಕ್ಕೆ ಹೋಗಿ, ,,ಎಲೈ ಮಾಹೇಶ್ವರಸಭೆಯೇ! ನನ್ನ ಬಿನ್ನಹವನ್ನು ಲಾಲಿಸಿ, ನನ್ನಿಂದ ಅರ್ಪಿಸಲ್ಪಟ್ಟ ಈ ದ್ರವ್ಯವು ಸ್ವಲ್ಪವಾಗಿದ್ದಾಗ್ಯೂ ಯಥೋಚಿತವಾದುದೆಂದು ಸ್ವೀಕರಿಸಿ, ನನ್ನನ್ನು ಅನುಗ್ರಹಿಸಿರಿ,, ಎಂದು ಮಾಹೇಶ್ವರರನ್ನು ಪ್ರಾರ್ಥಿಸಿ, ಆ ಪಾತ್ರೆಯನ್ನವರ ಮುಂದೆ ಇಡತಕ್ಕದು. ಮಾಹೇಶ್ವರರು ,, ಅನುಗ್ರಹಿಸುವೆವು,, ಎಂದು ಹೇಳುವರು. ಅನಂತರ ದೀಕ್ಷೆಯಾಗತಕ್ಕ ಕುಮಾರನು ಹಾಗೆಯೇ ದಕ್ಷಿಣಾಸಮೇತವಾದ ತಟ್ಟೆಯನ್ನು ಕೈಯಲ್ಲಿ ಹಿಡಿದು, ಆ ಸಭೆಯ ಮುಂದೆ ನಿಂತು, ,,ನನ್ನ ಬಾಲ್ಯವಯಸ್ಸಿನಲ್ಲಿ ತಿಳುವಳಿಕೆಯಿಲ್ಲದುದರಿಂದಲೂ, ತಂದೆ ಮೊದಲಾದವರ ಉಪೇಕ್ಷೆಯಿಂದಲೂ ಸಹ ಸಂಭವಿಸಿದ ಪಾಪಗಳನ್ನು ಹೋಗಲಾಡಿಸುವುದಕ್ಕೂ, ತಾಯಿಯ ಸ್ತನ್ಯಪಾನ, ಒಡನೆ ಬುಂಜಿಸುವಿಕೆ, ಎಂಜಲನ್ನು ತಿನ್ನುವಿಕೆ, ತಂಗಳನ್ನು ಬುಂಜಿಸುವಿಕೆ, ದೂಷ್ಯರಾದವರ ಮನೆಯಲ್ಲಿ ಭೋಜನಮಾಡುವಿಕೆ, ಸ್ವಜಾತಿ ಅನ್ಯಜಾತಿಯವರೊಡನೆ ಆಟಪಾಟಗಳನ್ನಾಡುವಿಕೆ, ಕ್ಲೃಪ್ತವಿಲ್ಲದೆ ಮೂತ್ರಾದಿಗಳನ್ನು ವಿಸರ್ಜಿಸಿ, ಆಯಾ ಕಾಲದಲ್ಲಿ ಶೌಚಾದಿಗಳನ್ನು ಮಾಡದಿರುವುದು, ಮೌನವನ್ನು ವಹಿಸದಿರುವುದು, ಮುಂತಾದುವುಗಳಿಂದ ಪ್ರಾಪ್ತಗಳಾದ ಪಾಪಗಳನ್ನು ನಾಶಗೊಳಿಸುವುದಕ್ಕಾಗಿ ಇದನ್ನು ನನ್ನ ಯಥಾಶಕ್ತಿಯಾದ ದಕ್ಷಿಣೆಯೆಂದು ನಿಶ್ಚೈಸಿ, ಪರಿಗ್ರಹಿಸಿ, ನನ್ನನ್ನು ಸಂಸ್ಕರಿಸಲು ಅನುಗ್ರಹಿಸಿರಿ,, ಎಂದು ಹೇಳಬೇಕು ಮಾಹೇಶ್ವರರು ,, ಅನುಗ್ರಹಿಸುವೆವು,,

ಅಥ ಸ್ವಸ್ತಿವಾಚನಾದೀನಾಂ ಸಂಕಲ್ಪಃ—ಯಜಮಾನಃ ಆಚಮ್ಯ, ಶುಚಿರ್ಭೂತ್ವಾ, ಮಂಗಲಸಂಭಾರಂ ಸಂಭೃತ್ಯ, ಸ್ವಲಂಕೃತೇ ಗೃಹೇ ಗೋಮಯೇನೋಪಲಿಪ್ತಭೂಮೌ ಸೋತ್ತರಚ್ಛದೇ ಭದ್ರಾಸನೇ ಉದಙ್ಮುಖ ಉಪವಿಶ್ಯ, "ಆಗಮಾರ್ಥಂತು ದೇವಾನಾಂ ಗಮನಾರ್ಥಂತುರಕ್ಷಸಾಂ| ಕುರ್ಯಾದ್ಘಂಟಾರವಂಭಕ್ತ್ಯಾ ದೇವತಾಹ್ವಾನಲಾಂಛನಂ" ಇತಿ ಘಂಟಾನಾದಂ ಕೃತ್ವಾ, ಪ್ರಾಣಾನಾಯಮ್ಯ, ದೇಶಕಾಲಾವನುಕೀರ್ತ್ಯ,............ಅಸ್ಯಾಂ ಶುಭತಿಥೌ ........ಗೋತ್ರೋತ್ಪನ್ನಸ್ಯ ಅಸ್ಯ ಕುಮಾರಸ್ಯ ದ್ವಿಜತ್ವಸಿದ್ಧ್ಯಾ ವೇದಾಧ್ಯಯನಾಧಿಕಾರಾರ್ಥಂ ಲಿಂಗಾಂಗಯೋಗಸಂಪತ್ತ್ಯಾ ಮಲಮಾಯಾ ವಿಮೋಚನಪೂರ್ವಕ ಶಾಶ್ವತಶಿವಸಾಯುಜ್ಯ ಸಿದ್ಧ್ಯರ್ಥಂ ತತ್ಸಾಧನೀಭೂತ ಶಿವದೀಕ್ಷಾಖ್ಯಂ ಕರ್ಮ ಕರಿಷ್ಯೇ. ತದಂಗ ಸ್ವಸ್ತಿವಾಚನ ಅಂಕುರಾರ್ಪಣ ನಾಂದೀಸಮಾರಾಧನ ಮಂಟಪದೇವತಾಪ್ರತಿಷ್ಠಾ ಕುಲದೇವತಾಸ್ಥಾಪನಾನಿಚ ಕರಿಷ್ಯೇ ತದಾದೌ ಪ್ರಾರೀಪ್ಸಿತಸ್ಯ ಕರ್ಮಣಃ ನಿರ್ವಿಘ್ನೇನ ಪರಿಸಮಾಪ್ತ್ಯರ್ಥಂ ಗಣಪತಿಪೂಜಾಂ ಕರಿಷ್ಯೇ ಇತಿ ಸಂಕಲ್ಪ್ಯ.

---

ಎಂದು ಪ್ರತ್ಯುತ್ತರವನ್ನೀಯುವರು. ಅನಂತರ ಯಜಮಾನನು ಆಚಮನವನ್ನು ಮಾಡಿ, ಪರಿಶುದ್ಧನಾಗಿ ಮಂಗಳಸಾಮಗ್ರಿಗಳನ್ನು ಜತೆಮಾಡಿಕೊಂಡು, ಅಲಂಕೃತವಾದ ಮಂಟಪದಲ್ಲಿ ಗೋಮಯದಿಂದ ಸಾರಿಸಿದ ಭೂಮಿಯಲ್ಲಿ ಉತ್ತರದಿಕ್ಕಿಗೆ ಅಂಚುಳ್ಳುದಾಗಿರುವ ಗದ್ದುಗೆಯಲ್ಲಿ ಅದೇ ಮುಖನಾಗಿ ಕುಳಿತು, ತನ್ನ ಬಲಪಕ್ಕದಲ್ಲಿ ದೀಕ್ಷೆ ಮಾಡಿಸಿಕೊಳ್ಳತಕ್ಕ ವಟುವನ್ನು ಕುಳ್ಳಿರಿಸಿ, ಆಗಮಾರ್ಥಂತು ಎಂಬ ಮಂತ್ರವನ್ನು ಹೇಳಿ, ಘಂಟಾನಾದವನ್ನು ಮಾಡಿ, ಪ್ರಾಣಾಯಾಮವನ್ನು ಮಾಡಿ, ದೇಶಕಾಲಗಳನ್ನು ಹೇಳಿ, ಈ ಶುಭದಿವಸ ಇಂಥ ಗೋತ್ರೋತ್ಪನ್ನನಾದ ಈ ಕುಮಾರನಿಗೆ ದ್ವಿಜತ್ವಸಿದ್ಧಿಯಿಂದ ವೇದಾಧ್ಯಯನ ಮಾಡುವ ಅಧಿಕಾರವುಂಟಾಗುವುದಕ್ಕಾಗಿಯೂ, ಲಿಂಗಾಂಗಸಾಮರಸ್ಯ ಜ್ಞಾನದಿಂದಆಣವಾದಿ ಮಲಮಾಯಾವಿನಾಶಪೂರ್ವಕವಾಗಿ ಶಾಶ್ವತ ಶಿವಸಾಯುಜ್ಯಸಿದ್ಧಿಯುಂಟಾಗುವುದಕ್ಕಾಗಿಯೂ ಮೋಕ್ಷಸಾಧಕವಾದ ಶಿವದೀಕ್ಷಾಕರ್ಮವನ್ನು ಮಾಡುತ್ತೇನೆ. ಮೊದಲು ಆ ಕರ್ಮವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳುವುದಕ್ಕಾಗಿ ಗಣಪತಿ ಪೂಜೆಯನ್ನು ಮಾಡುತ್ತೇನೆ. ಅನಂತರ ಪುಣ್ಯಾಹ ವಾಚನ, ನಾಂದೀಸಮಾರಾಧನ, ಅಂಕುರಾರ್ಪಣ, ಮಂಟಪದೇವತಾಪ್ರತಿಷ್ಠಾ, ಕುಲದೇವತಾ ಸ್ಥಾಪನಗಳನ್ನು ಮಾಡುತ್ತೇನೆ" ಎಂದು ಸಂಕಲ್ಪಿಸಿ, ತತ್ಪೂಜಾಂಗವಾದ ಕಲಶಾರಾಧನೆಯನ್ನು ಮಾಡಬೇಕು. ಹೇಗೆಂದರೆ—ಜಲಪೂರಿತವಾದ ಕಲಶದಮೇಲೆ ಬಲಗೈಯನ್ನು ಮುಚ್ಚಿ "ಕಲಶಸ್ಯ... ಸನ್ನಿಧಿಂಕುರು" ಎಂದು ಹೇಳಿ ಅಭಿಮಂತ್ರಿಸಿ, ಆ ಕಲಶವನ್ನು ಗಂಧಾದ್ಯುಪಚಾರಗಳಿಂದ ಪೂಜಿಸಿ, ಆ ಕಲಶೋದಕದಿಂದ ಸಕಲ ಪೂಜಾಸಾಮಗ್ರಿಗಳನ್ನೂ ತನ್ನನ್ನೂ ಸಂಪ್ರೋಕ್ಷಿಸಿ, ಬಳಿಕ ಮುಂಗಡೆಯಲಿ

ತದಂಗಕಲಶಾರಾಧನಂ ಕುರ್ಯಾತ್-ಕಲಶೋಪರಿ ಹಸ್ತಂನಿಧಾಯ ‹‹ಕಲಶಸ್ಯಮುಖೇರುದ್ರಃ ಕಂಠೇವಿಷ್ಣುಸ್ಸಮಾಶ್ರಿತಃ | ಮೂಲೇತತ್ರಸ್ಥಿತೋಬ್ರಹ್ಮಾ ಮಧ್ಯೇಮಾತೃಗಣಾಸ್ಸ್ಮೃತಾಃ| ಕುಕ್ಷೌತುಸಾಗರಾಸ್ಸರ್ವೇ ಸಪ್ತದ್ವೀಪಾವಸುಂಧರಾ| ಋಗ್ವೇದೋಽಥಯಜುರ್ವೇದ ಸ್ಸಾಮವೇದೋಹ್ಯಥರ್ವಣಃ| ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬುಸಮಾಶ್ರಿತಾಃ| ಗಂಗೇಚಯಮುನೇಚೈವ ಗೋದಾವರಿ ಸರಸ್ವತಿ | ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂಕುರು›› ಇತ್ಯಭಿಮಂತ್ರ್ಯ, ಕಲಶಂ ಗಂಧಾದಿಭಿರಭ್ಯರ್ಚ್ಯ, ಕಲಶೋದಕೇನ ಪೂಜಾದ್ರವ್ಯಾಣ್ಯಾತ್ಮಾನಂಚ ಸಂಪ್ರೋಕ್ಷ್ಯ, ಅಕ್ಷತಮಂಡಲೇ ಗಣಪತಿಮಾವಾಹಯೇತ್.

## ಗಣೇಶಪೂಜಾ

‹‹ಗಣಾನಾಂತ್ವಾಗೃತ್ಸಮದೋಗಣಪತಿರ್ಜಗತೀ | ಗಣಪತ್ಯಾವಾಹನೇವಿನಿಯೋಗಃ›› (ಗಣಾನಾಂತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ | ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶೃಣ್ವನ್ನೂತಿಭಿಸ್ಸೀದಸಾದನಂ) ಅಸ್ಮಿನ್ ಮಂಡಲೇ ಭೂಃ ಗಣಪತಿ ಮಾವಾಹಯಾಮಿ| ಭುವಃ ಗಣಪತಿಮಾವಾಹಯಾಮಿ. ಭೂರ್ಭುವಸ್ಸುವಃ ಗಣಪತಿಮಾವಾಹಯಾಮಿ | ಇತ್ಯಾವಾಹ್ಯ, ನವಶಕ್ತಿಪೂಜಾಂ ಕರಿಷ್ಯೇ—ತೀವ್ರಾಯೈನಮಃ | ಜ್ವಾಲಿನ್ಯೈನಮಃ | ನಂದಾಯೈನಮಃ | ಭೋಗದಾಯಿನ್ಯೈನಮಃ | ಕಾಮರೂಪಿಣ್ಯೈನಮಃ | ಉಗ್ರಾಯೈನಮಃ | ತೇಜೋವತ್ಯೈನಮಃ | ಸತ್ಯಾಯೈನಮಃ | ವಿಘ್ನನಾಶಿನ್ಯೈನಮಃ | ಓಂ ನಮೋಭಗವತೇ ಸಕಲಗುಣಾತ್ಮಕಶಕ್ತಿಯುತಾಯೆ ಮಹಾಗಣಾಧೀಶ್ವರಾಯ ಯೋಗಪದ್ಮಪೀಠಾತ್ಮನೇನಮಃ ಸುವರ್ಣಪೀಠಂಕಲ್ಪಯಾಮಿ || ಸ್ವಾತ್ಮಸಂಸ್ಥಮಜಂಶುದ್ಧಂತ್ವಾಮದ್ಯಗಣನಾಯಕ | ಅರಣಾವಿವ ಹವ್ಯಾಶಮೂರ್ತಿ ಮಾವಾಹಯಾಮ್ಯಹಂ || ಓಂ ಭೂರ್ಭುವಸ್ಸುವರೋಂ | ಸಶಕ್ತಿಸಾಂಗಸಾಯುಧಸವಾಹನ ಸಪರಿವಾರ ಮಹಾಗಣಾಧೀಶ್ವರ ಅತ್ರಾಗ

---

ರುವ ಅಕ್ಷತೆಗಳ ಗುಡ್ಡೆಯಮೇಲೆ ಗಣಪತಿಯನ್ನು ಆವಾಹಿಸಬೇಕು. ‹‹ಗಣಾನಾಂತ್ವಾ... ಮಾವಾಹಯಾಮಿ›› ಎಂದು ಹೇಳಿ ಹಸ್ತವನ್ನಿಟ್ಟು ಆವಾಹಿಸಿ, ತೀವ್ರಾಯೈನಮಃ ಇತ್ಯಾದಿ ಮಂತ್ರಗಳನ್ನು ಹೇಳಿಕೊಂಡು ಅಕ್ಷತೆಗಳನ್ನು ಹಾಕುತ್ತ ನವಶಕ್ತಿಗಳನ್ನು ಅದೇ ಮಂಡಲದಲ್ಲೇ ಆವಾಹಿಸಿ, ‹‹ಆವಾಹಯಾಮಿ... ವರದೋಭವ ಎಂದು ಹೇಳಿ ಆವಾಹನ್ಯಾದಿ ಷಣ್ಮುದ್ರೆಗಳನ್ನು ತೋರಿಸಿ. ಏಕದಂತಾಯ ಎಂಬಾರಂಭಿಸಿ, ಗಾಂಹೃದಯಾಯನಮಃ ಇತ್ಯಾದಿ ಮಂತ್ರಗಳಿಂದ

ಚ್ಛಾಗಚ್ಛ | ಆವಾಹಯಾಮಿ ಆವಾಹಿತೋಭವ | ಸ್ಥಾಪಯಾಮಿ ಸ್ಥಾಪಿತೋ ಭವ | ಸನ್ನಿಹಿತೋಭವ | ಅವಕುಂಠಿತೋಭವ | ವ್ಯಾಪ್ತೋಭವ | ವರದೋ ಭವ | ಇತಿಷಣ್ಮುದ್ರಾಃಪ್ರದರ್ಶ್ಯ | (ಏಕದಂತಾಯವಿದ್ಮಹೆ ವಕ್ರತುಂಡಾಯ ಧೀಮಹಿ ತನ್ನೋವಿಘ್ನೇಶ್ವರಃಪ್ರಚೋದಯಾತ್) ಗಾಂಹೃದಯಾಯನಮಃ | ಗೀಂಶಿರಸೇಸ್ವಾಹಾ | ಗೂಂಶಿಖಾಯೈವಷಟ | ಗೈಂಕವಚಾಯಹುಂ| ಗೌಂ ನೇತ್ರತ್ರಯಾಯವೌಷಟ್ | ಗಃ ಅಸ್ತ್ರಾಯಫಟ್ | ಓಂ ಭೂರ್ಭುವಸ್ಸುವರೋ ಮಿತಿದಿಗ್ಬಂಧಃ ಇತಿನ್ಯಾಸಂಕೃತ್ವಾ, ಧ್ಯಾನಂ— ರಕ್ತೋರಕ್ತಾಂಗರಾಗಶ್ಶುಕ ಕುಸುಮಯುತಸ್ತುಂದಿಲ ಶ್ಚಂದ್ರಮೌಳಿರ್ನೇತ್ರೈರ್ಯುಕ್ತಸ್ತ್ರಿಭಿರ್ವಾಮನಕರಚರ ಣೋಬೀಜಪೂರಾತ್ತವಾಸಾಃ | ಹಸ್ತಾಗ್ರಕ್ಲ್ಪಪ್ತಪಾಶಾಂಕುಶರದವರದೋನಾ ಗವಕ್ತ್ರೋಹಿಭೂಷೋ ದೇವಃ ಪದ್ಮಾಸನಸ್ಥೋಭವತು ನತಸುರೋ ಭೂತಯೇ ವಿಘ್ನರಾಜಃ || ಗಂ ಗಣಪತಯೇನಮಃ ಇತಿ ಜಪಂ ಕೃತ್ವಾ | ಪಾದ್ಯಾಘ್ಯಾ ದಿಕೋಪಚಾರೈಸ್ಸಂಪೂಜ್ಯ, ದ್ವಾದಶನಾಮಪೂಜಾಂಕುರ್ಯಾತ್—ಸುಮುಖಾ ಯನಮಃ | ಏಕದಂತಾಯನಮಃ | ಕಪಿಲಾಯನಮಃ | ಗಜಕರ್ಣಕಾಯನ ಮಃ | ಲಂಬೋದರಾಯನಮಃ | ವಿಕಟಾಯನಮಃ | ವಿಘ್ನರಾಜಾಯನಮಃ | ಗಣಾಧಿಪಾಯನಮಃ | ಬಾಲಚಂದ್ರಾಯನಮಃ | ಗಜಾನನಾಯನಮಃ | ಧೂ ಮಕೇತವೇನಮಃ | ಸಿದ್ಧಿವಿನಾಯಕಮೂರ್ತಯೆನಮಃ | ಇತಿ ಪುಷ್ಪಾಣಿ ಸಮ ರ್ಪ್ಯ, ಧೂಪಮಾಘ್ರಾಪಯಾಮಿ, ದೀಪಂದರ್ಶಯಾಮಿ, ನೈವೇದ್ಯಂಸಮರ್ಪ ಯಾಮಿ, ತಾಂಬೂಲಂಸಮರ್ಪಯಾಮಿ, ಸುವರ್ಣಪುಷ್ಪಂಸಮರ್ಪಯಾಮಿ ಇತಿ ತತ್ತದುಪಚಾರಮಂತ್ರೇಣ ಸಮರ್ಪ್ಯ, (ನಿಷುಸೀದಗಣಪತೇಗಣೇಷುತ್ವಾ ಮಾಹುರ್ವಿಪ್ರತಮಂಕವೀನಾಂ | ನಋತೇ ತ್ವತ್ಕ್ರಿಯತೇ ಕಿಂಚ ನಾರೇ ಮಹ ಮರ್ಕಂ ಮಘವಂಚಿತ್ರಮರ್ಚ) ಇತಿ ಮಂತ್ರಪುಷ್ಪಂ ಸಮರ್ಪಯಾಮಿ—ವಕ್ರ ತುಂಡಮಹಾಕಾಯ ಸೂರ್ಯಕೋಟಿಸಮಪ್ರಭ | ಅವಿಘ್ನಂಕುರುಮೇದೇವ ಸರ್ವ ಕಾರ್ಯೇಷುಸರ್ವದಾ | ಯಸ್ಯಸ್ಮೃತ್ಯಾಚನಾಮೋಕ್ತ್ಯಾ ತಪೋದೀಕ್ಷಾಕ್ರಿ ಯಾದಿಷು | ನ್ಯೂನಂಸಂಪೂರ್ಣತಾಂಯಾತಿ ಸದ್ಯೋವಂದೇಸನಾಶಿವಂ || ಇತಿ

---

ಕ್ರಮವಾಗಿ ದೇಹನ್ಯಾಸವನ್ನೂ ದಿಗ್ಬಂಧನವನ್ನೂ ಮಾಡಿ, ಕೈಮುಗಿದುಕೊಂಡು, ರಕ್ತೋ... ವಿಘ್ನರಾಜಃ ಎಂದು ಧ್ಯಾನಿಸಿ, ‹‹ಗಂಗಣಪತಯೇನಮಃ›› ಎಂಬ ಮಂತ್ರವನ್ನು ನೂರೆಂಟು ವೇಳೆ ಜಪಿಸಿ, ಬಳಿಕ ಪಾದ್ಯಾದಿ ಸಾಂಗೋಪಚಾರ ಪೂಜೆಗಳನ್ನು ಮಾಡಿ, ‹‹ವಕ್ರತುಂಡ...

ಗಣಪತಿಪೂಜನೇನ ಭಗವಾಂಚ್ಛ್ರೀ ಸದಾಶಿವಸ್ಸುಪ್ರೀತಸ್ಸುಪ್ರಸನ್ನೋವರದೋ ಭವತು ಇತಿ ಸಾಕ್ಷತಹಿರಣ್ಯೋದಕಂ ವಿಸೃಜೇತ್.

ಸ್ವ ಸ್ತಿ ವಾ ಚ ನಂ.

ತತಃ ಕರ್ತಾ ಸ್ವಪುರತಃ ರಂಗವಲ್ಯಾದಿಯುಕ್ತೇ ಭೂತಲೇ (ಮಹೀದ್ಯೌಃ ಪೃಥಿವೀಚನಇಮಂ ಯಜ್ಞಂಮಿಮಿಕ್ಷತಾಂ | ಪಿಪೃತಾನ್ನೋಭರೀಮಭಿಃ) ಇತಿ ದಕ್ಷಿಣೋತ್ತರತೋ ಭೂಮಿಂ ಸ್ಪೃಷ್ಟ್ವಾಜಪೇತ್ (ಓಷಧಯಸ್ಸಂವದಂತೇ ಸೋಮೇನಸಹರಾಜ್ಞಾ, ಯಸ್ಮೈಕೃಣೋತಿಬ್ರಾಹ್ಮಣಸ್ತಗ್ಂ ರಾಜನ್ಪಾರಯಾಮಸಿ) ಇತಿ ಪರ್ಣದ್ವಯಮಾಸ್ತೀರ್ಯ | (ಯೇನತೋಕಾಯತನಯಾಯಧಾನ್ಯಂ ಬೀಜಂ ವಹಧ್ವೇ ಅಕ್ಷಿತಂ| ಅಸ್ಮಭ್ಯಂ ತದ್ಧತ್ತನಯಧ್ವಈಮಹೇ | ರಾಧೋ ವಿಶ್ವಾಯುಸೌಭಗಂ) ಇತಿಪ್ರಸ್ಥಪರಿಮಿತೌ ತಂಡುಲಪುಂಜೌ ದಕ್ಷಿಣೋತ್ತರತಃ ಕೃತ್ವಾ (ಆಕಲಶೇಷುಧಾವತಿ ಶ್ಯೇನೋವರ್ಮವಿಗಾಹತೇ ಅಭಿದ್ರೋಣಾಕನಿಕ್ರದತ್)ಇತಿಪುಂಜೋಪರಿ ಧಾತುಮಯೌಮೃಣ್ಮಯೌವಾ ಕಲಶೌನಿಧಾಯ(ಇಮಂಮೇಗಂಗೇಯಮುನೇಸರಸ್ವತಿ ಶುತುದ್ರಿಸ್ತೋಮಗ್ಂಸಚತಾಪರುಷ್ಣ್ಯಾ ಅಸಿಕ್ನ್ಯಾಮರುದ್ವೃಧೇವಿತಸ್ತಯಾರ್ಜೀಕೀಯೇಶೃಣುಹ್ಯಾಸುಷೋಮಯಾ) ಇತಿ ತೀರ್ಥಜಲೇನ ಪ್ರತ್ಯೇಕಂ ಪೂರಯಿತ್ವಾ (ಗಂಧದ್ವಾರಾಂದುರಾಧರ್ಷಾಂ ನಿತ್ಯಪುಷ್ಟಾಂಕರೀಷಿಣೀಂ | ಈಶ್ವರೀಗ್ಂ ಸರ್ವಭೂತಾನಾಂತಾಮಿಹೋಪಹ್ವಯೇ ಶ್ರಿಯಂ) ಇತಿ ಗಂಧಂಕಲಶಯೋರ್ದದ್ಯಾತ್ || ಚಂದನಾದಿನಾತಾವನುಲಿಪ್ಯ || ಮಾಲಾಭೂಷಿತೌಕೃತ್ವಾ || (ಸಹಿರತ್ನಾನಿದಾಶುಷೇ ಸುವಾತಿ ಸವಿತಾಭಗಃ

---

ಸದಾಶಿವಂ" ಎಂದು ಪ್ರಾರ್ಥಿಸಿ, ಇತಿ ಗಣಪತಿಪೂಜನೇನ ..ವರದೋಭವತು ಎಂದು ಹೇಳುತ್ತ ಅಕ್ಷತೆಗಳಿಂದಲೂ ದಕ್ಷಿಣೆಯಿಂದಲೂ ಕೂಡಿದ ಜಲವನ್ನು ಎರೆಯುವುದು

ಸ್ವಸ್ತಿವಾಚನವು.

ಯಜಮಾನನು ತನ್ನ ಮುಂಗಡೆಯಲ್ಲಿ ಸಾರಿಸಿ ರಂಗವಲ್ಲಿಯನ್ನು ಬಿಟ್ಟಿರುವ ಭೂಮಿಯಮೇಲೆ ತನ್ನ ಎರಡು ಕೈಗಳನ್ನೂ ದಕ್ಷಿಣೋತ್ತರ ಭಾಗಗಳಲ್ಲಿಟ್ಟು, ಮಹೀ....ಮಭಿಃ ಎಂದು ಜಪಿಸಿ, ಆ ಸ್ಥಳದಮೇಲೆ ಎರಡು ಬಾಳೆಲೆಗಳನ್ನು ಓಷಧಯ....ಯಾಮಸಿ ಎಂದು ಹಾಸಿ, ಅವುಗಳಮೇಲೆ ಯೇನ...ಭಗಂ ಎಂದು ದಕ್ಷಿಣೋತ್ತರ ಭಾಗಗಳಲ್ಲಿ ಬಳ್ಳದಳತೆಯ ಅಕ್ಕಿ ಗುಡ್ಡೆಗಳೆರಡನ್ನು ಇಟ್ಟು, ಅವುಗಳ ಮೇಲೆ ಆಕಲಶೇಷು ಎಂಬ ಮಂತ್ರದಿಂದ ಲೋಹಮಯ ಅಥವಾ ಮೃಣ್ಮಯಗಳಾದ ಕಲಶಗಳೆರಡನ್ನಿಟ್ಟು, ಅವುಗಳಲ್ಲಿ ಇಮಂಮೆ...ಷಮಯಾ

ಶಂಭಾಗಂಚಿತ್ರಮೀಮಹೇ) ಇತಿ ಪಂಚರತ್ನಾನಿ ನಿಕ್ಷಿಪ್ಯ (ಪ್ರವೋಯಜ್ಞೇಷು ದೇವಯಂತೋ ಅರ್ಚ್ಯಂದ್ಯಾವಾನಗ್ಂ ಹೋಭಿಃ ಪೃಥಿವಿ ಇಷದ್ಯೈ ಏಷಾಂ ಬೃಹ್ಮಣ್ಯಸಮಾನಿವಿಪ್ರಾವಿಷ್ವಗ್ಸ್ವಿಯಂತಿವನಿನೋನಶಾಖಾಃ) ಇತಿ ಆಮ್ರಪಲ್ಲ ವೈರಲಂಕೃತ್ಯ| ಕಾಂಡಾತ್ಕಾಂಡಾತ್ಪ್ರರೋಹಂತಿ ಪರುಷಃಪರುಷಃಪರೀ| ಏವಾ ನೋದೂರ್ವೇ ಪ್ರತನುಸಹಸ್ರೇಣಶತೇನಚ) ಇತಿ ದರ್ಭಕೂರ್ಚಂ ನಿದಧ್ಯಾತ್. (ಹಿರಣ್ಯರೂಪಸ್ಸಹಿರಣ್ಯಸಂದೃಗಪಾನ್ನಪಾತ್ಸೇದುಹಿರಣ್ಯವರ್ಣಃ| ಹಿರಣ್ಯಯಾ ತ್ಪರಿಯೋನೇರ್ನಿಷದ್ಯಾಹಿರಣ್ಯಂದಾದತ್ಯಂನಮಸ್ಮೈ) ಇತಿ ಹಿರಣ್ಯಂದದ್ಯಾತ್ (ಪೂರ್ಣಾದರ್ವಿಪರಾಪತ ಸುಪೂರ್ಣಾ ಪುನರಾಪತ ವಸ್ನೇವವಿಕ್ರೀಣಾವಹಇಷ ಮೂರ್ಜಗ್ಂಶತಕ್ರತೊ) (ಯಾಃಫಲಿನೀರ್ಯಾ ಅಫಲಾಅಪುಷ್ಪಾಯಾಶ್ಚಪುಷ್ಪಿ ಣೀಃ ಬೃಹಸ್ಪತಿ ಪ್ರಸೂತಾಸ್ತಾನೋಮುಂಚತ್ವಗ್ಂಹಸಃ) ಇತಿಚ ಕಲಶಯೋ ರುಪರಿ ನಾರಿಕೇಳಫಲೇ ನಿಕ್ಷಿಪ್ಯ (ಯುವಾಸುವಾಸಾಃ ಪರಿವೀತಆಗಾತ್ಸವು ಶ್ರೇಯಾನ್ಭವತಿಜಾಯಮಾನಃ ತಂಧೀರಾಸ್ಸಕವಯಉನ್ನಯಂತಿಸ್ವಾಧಿಯೋಮ ನಸಾ ದೇವಯಂತಃ) ಇತಿ ಕಲಶಯೋರುಪರಿ ವಸ್ತ್ರೇ ನಿದಧ್ಯಾತ್ ‖ (ತಂತುಂ ತನ್ವನ್ರಜಸೋ ಭಾನುಮನ್ವಿಹಿ | ಜ್ಯೋತಿಷ್ಮತಃಪಥೋ ರಕ್ಷಧಿಯಾಕೃತಾನ್ | ಅನುಲ್ಬಣಂವಯತಜೋಗುವಮಪೋಮನುರ್ಭವ ಜನಯಾದೈವ್ಯಂಜನಂ) ಇತಿ ಶ್ವೇತತಂತುಭಿರ್ವೇಷ್ಟಯೇತ್. (ತತ್ತ್ವಾಯಾಮೀತ್ಯಸ್ಯ ಶುನಶ್ಶೇಫೋವರುಣ ಸ್ತ್ರಿಷ್ಟುಪ್, ಕಲಶೇ ವರುಣಾವಾಹನೇ ವಿನಿಯೋಗಃ—(ತತ್ತ್ವಾಯಾಮಿಬ್ರಹ್ಮ ಣಾವಂದಮಾನಸ್ತದಾಶಾಸ್ತೇ ಯಜಮಾನೋಹವಿರ್ಭಿಃ | ಅಹೇಳಮಾನೋವ ರುಣೇಹಬೋಧ್ಯುರುಶಗ್ಂ ಸಮಾನಆಯುಃ ಪ್ರಮೋಷೀಃ) ಇತಿ ವರುಣಮಾ ವಾಹ್ಯ,— ಕಲಶಸ್ಯ ಮುಖೇ ರುದ್ರಃ ಕಂಠೇವಿಷ್ಣುಸ್ಸಮಾಶ್ರಿತಃ | ಮೂಲೇ ತತ್ರಸ್ಥಿತೋಬ್ರಹ್ಮಾ ಮಧ್ಯೇಮಾತೃಗಣಾಸ್ಸ್ಮೃತಾಃ | ಕುಕ್ಷೌತುಸಾಗರಾ ಸ್ಸರ್ವೇ ಸಪ್ತದ್ವೀಪಾವಸುಂಧರಾ | ಋಗ್ವೇದೋಽಥಯಜುರ್ವೇದ ಸ್ಸಾಮವೇ

---

ಎಂದು ಶುದ್ಧ ಜಲವನ್ನು ತುಂಬಿ, ಗಂಧ ..ಶ್ರಿಯಂ ಎಂದು ಗಂಧವನ್ನು ಇಡದಿ, ಕಲಶಗಳ ಮೇಲೂ ಗಂಧವನ್ನು ಲೇಪಿಸಿ, ಪೂಮಾಲಿಯಿಂದಲಂಕರಿಸಿ, ಸಹಿ...ಮಹೇ ಎಂದು ಪಂಚರತ್ನ ಗಳನ್ನು ಅವುಗಳಲ್ಲಿ ಹಾಕಿ, ಪ್ರವೋ....ಶಾಖಾಃ ಎಂದು ಮಾವಿನ ಚಿಗುರುಗಳಿಂದಲಂಕರಿಸಿ, ಕಾಂಡಾ....ಶತೇನಚ ಎಂದು ದರ್ಭಕೂರ್ಚನಗಳನ್ನಿಟ್ಟು, ಹಿರಣ್ಯ....ನಮಸ್ಮೈ ಎಂದು ಸುವ ರ್ಣವನ್ನು ಅವುಗಳಲ್ಲಿಟ್ಟು, ಪೂರ್ಣಾ....ಹಸಃ ಎಂದು ತೆಂಗಿನಕಾಯಿಗಳನ್ನಿಟ್ಟು, ಯುವಾ.... ಯಂತಃ ಎಂದು ವಸ್ತ್ರಗಳಂ ಧರಿಸಿ, ತಂತುಂ....ವ್ಯಂಜನಂ ಎಂದು ಬಿಳಿಯ ನೂಲನ್ನು ಸುತ್ತಿ,

ದೋಹ್ಯಥರ್ವಣಃ | ಅಂಗೈಶ್ಚಸಹಿತಾಸ್ಸರ್ವೇಕಲಶಾಂಬುಸಮಾಶ್ರಿತಾಃ | ಗಾ
ಯತ್ರೀಚೈವಸಾವಿತ್ರೀ ಶಾಂತಿಃಪುಷ್ಟಿಕರೀತಥಾ | ಸರ್ವೇಸಮುದ್ರಾಸ್ಸರಿತಸ್ತೀ
ರ್ಥಾನಿಜಹ್ರದಾನದಾಃ | ಆಯಾಂತುಮಮಶಾಂತ್ಯರ್ಥಂ ದುರಿತಕ್ಷಯಕಾರ
ಕಾಃ ,, ಇತಿ ಕಲಶೌಸ್ಸ್ಪೃಷ್ಟ್ವಾಜಪೇತ್ | ತತಃ ವರುಣಾದಿ ದೇವತಾಭ್ಯೋ
ನಮಃ ಇತಿ ಪೂಜಾಂಕೃತ್ವಾ, ಅನಯಾ ಪೂಜಯಾ ವರುಣಾದಿ ದೇವತಾ
ಸ್ಸುಪ್ರೀತಾ ಸ್ಸುಪ್ರಸನ್ನಾವರದಾಭವಂತ್ವಿತಿ ಸಾಕ್ಷತಹಿರಣ್ಯೋದಕಂ ವಿಸೃಜೇ
ತ್. ತತಃ ಪ್ರಾಣಾನಾಯಮ್ಯ ,, ಸರ್ವೇಷುಕಾಲೇಷು ಸಮಸ್ತದೇಶೇಷ್ವ
ಶೇಷಕಾರ್ಯೇಷು ತಥೈಶ್ವರೀಶ್ವರಃ | ಸರ್ವಸ್ವರೂಪೀಭಗವಾನನಾದಿರ್ಮಮಾಸ್ತು
ಮಾಂಗಲ್ಯವಿವೃದ್ಧಯೇಶಿವಃ || ಗಾಯತ್ರೀಚೈವಸಾವಿತ್ರೀಶಾಂತಿಃ ಪುಷ್ಟಿ
ಕರೀತಥಾ | ಆಯಾಂತುಮಮಶಾಂತ್ಯರ್ಥಂ ದುರಿತಕ್ಷಯಕಾರಕಾಃ | ಅನ
ನ್ಯಾಶ್ಚಿಂತಯಂತೋಮಾಂಯೇಜನಾಃ ಪರ್ಯುಪಾಸತೇ | ತೇಷಾಂನಿತ್ಯಾಭಿ
ಯುಕ್ತಾನಾಂ ಯೋಗಕ್ಷೇಮಂವಹಾಮ್ಯಹಂ | ಸ್ಮೃತೇಸಕಲಕಲ್ಯಾಣಭಾ
ಜನಂ ಯತ್ರಜಾಯತೇ | ಪುರುಷಸ್ತಮಜಂನಿತ್ಯಂ ವ್ರಜಾಮಿಶರಣಂಶಿವಂ |
ಸರ್ವಮಂಗಳಮಾಂಗಲ್ಯೇ ಶಿವೇಸರ್ವಾರ್ಥಸಾಧಕೇ | ಶರಣ್ಯೇತ್ರ್ಯಂಬಕೇ
ದೇವಿ ನಾರಾಯಣಿನಮೋಸ್ತುತೇ || ತದೇವಲಗ್ನಂಸುದಿನಂ ತದೇವತಾರಾಬಲಂ
ಚಂದ್ರಬಲಂ ತದೇವ | ವಿದ್ಯಾಬಲಂ ದೈವಬಲಂ ತದೇವ ಗೌರೀಪತೇತೇಂಘ್ರಿ
ಯುಗಂಸ್ಮರಾಮಿ || ಇತೀಷ್ಟದೇವತಾಂಧ್ಯಾತ್ವಾ || ಅವನೀಕೃತಜಾನುಮಂಡ
ಲಃ ಕಮಲಮುಕುಳಸದೃಶಮಂಜಲಿಂ ಶಿರಸಿಕೃತ್ವಾ, ಉಮಾಮಹೇಶ್ವರಾಭ್ಯಾಂ
ನಮಃ, ಪ್ರಮಥಗಣೇಭ್ಯೋನಮಃ, ಭಕ್ತಮಾಹೇಶ್ವರೇಭ್ಯೋನಮಃ, ದುರ್ಗಾಗ
ಣಪತಿಕ್ಷೇತ್ರಪಾಲಕೇಭ್ಯೋನಮಃ, ಮಾತೃಭ್ಯೋನಮಃ, ಪಿತೃಭ್ಯೋನಮಃ,
ಆಚಾರ್ಯೇಭ್ಯೋನಮಃ, ಇಷ್ಟದೇವತಾಯೈನಮಃ, ಸರ್ವೇಭ್ಯೋ ಮಾಹೇಶ್ವ

---

ಆ ಕಲಶಗಳಲ್ಲಿ ತಶ್ಯಾಯಾಮಿ....ನದಾಃ ಎಂದು ಅಭಿಮಂತ್ರಿಸಿ, ವರುಣಾದಿ ದೇವತೆಗಳನ್ನು
ಆವಾಹಿಸಿ, ಬಳಿಕ ವರುಣಾದಿ ದೇವತೆಗಳನ್ನು ಯಥಾಕ್ರಮವಾಗಿ ಪೂಜಿಸಿ, ಅನಯಾ....ಭವಂ
ತು ಎಂದು ಸಾಕ್ಷತ ಜಲವನ್ನು ಎರೆಯಬೇಕು. ಬಳಿಕ ಯಜಮಾನನು ಪ್ರಾಣಾಯಾಮಮಾಡಿ
ಕೈಮುಗಿದುಕೊಂಡು, ಸರ್ವೇಷು....ಸ್ಮರಾಮಿ,, ಎಂದು ಜಪಿಸಿ, ತನ್ನ ಇಷ್ಟದೈವವನ್ನು ಧ್ಯಾ
ನಿಸಿ, ಭೂಮಿಗೆ ಮಂಡಿಗಳನ್ನು ಸೋಂಕಿಸಿ, ತಲೆಯಮೇಲೆ ಕೈಜೋಡಿಸಿ ಮಣಿದು, ಉಮಾಮ
ಹೇಶ್ವರಾಭ್ಯಾಂನಮಃ....ಮಾಹೇಶ್ವರೇಭ್ಯೋನಮಃ ಎಂದು ಹೇಳಿ ನಮಸ್ಕರಿಸಿ, ಬಳಿಕ ಉತ್ತ
ಮರಾಗಿಯೂ, ಪ್ರತ್ಯುತ್ತರವನ್ನು ಹೇಳುವಲ್ಲಿ ಸಮರ್ಥರಾಗಿಯೂ, ಕೆಟ್ಟ ದಾನವನ್ನು ಸ್ವೀ

ಕೇಭ್ಯೋನಮಃ ಇತಿ ನತ್ವಾ, ಪ್ರಶಸ್ತಾರ್ಥ ಪ್ರತಿವಚನಸಮರ್ಥಾ ನ್ನಿಷಿದ್ಧಪ್ರತಿಗ್ರಹನಿವೃತ್ತಾನ್ ಶುಚೀನ್ ಸೋತ್ತರೀಯಾನ್ ಪವಿತ್ರಪಾಣೀನ್ ಯುಗ್ಮಾನ್ ಮಾಹೇಶ್ವರಾನ್ ಪುರತಃ ಪ್ರಾಙ್ಮುಖಾನ್ವಾ ಉದಙ್ಮುಖಾನ್ವಾ ಸಮುಪವೇಶ್ಯ, ಗಂಧಪುಷ್ಪಾದಿಭಿರಭ್ಯರ್ಚ್ಯ, ಆಶಿಷಃಪ್ರಾರ್ಥಯಾಮಿತ್ಯುಕ್ತ್ವಾ, (ಸತ್ಯಾಏತಾ ಆಶಿಷಸ್ಸಂತು ದೀರ್ಘಾನಾಗಾನದ್ಯೋಗಿರಯಸ್ತ್ರೀಣಿ ವಿಷ್ಣುಸದಾನಿಚ| ತೇನಾಯುಃ ಪ್ರಮಾಣೇನ ಪುಣ್ಯಾಹಂ ದೀರ್ಘಮಾಯುರಸ್ತು) ಇತಿ ತೈರುಕ್ತೇ,'ಅನಯಾ ಪೂಜಯಾ ವರುಣಾದಿದೇವತಾ ಸ್ಸುಪ್ರೀತಾಸ್ಸುಪ್ರಸನ್ನಾವರದಾಭವಂತ್ವಿತಿ ಸಾಕ್ಷತಂ ಜಲಂ ವಿಸೃಜೇತ್ || ತತಃ ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, "ದೀಕ್ಷಾಕರ್ಮ ಕರ್ತುಮಾದೌ ಶುದ್ಧಿವೃದ್ಧ್ಯಭ್ಯುದಯಸಿದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಶಾಂತ್ಯರ್ಥಂ ಮಾಹೇಶ್ವರೈಸ್ಸಹ ಸ್ವಸ್ತಿಪುಣ್ಯಾಹವಾಚನಂ ಕರಿಷ್ಯೇ" ಇತಿ ಸಂಕಲ್ಪ್ಯ, ಆಪಇತ್ಯುಕ್ತ್ವಾ, ಶಿವಾಆಪಸ್ಸಂತು ಇತಿ ಮಾಹೇಶ್ವರಾನ್ವಾಚಯಿತ್ವಾ | ಗಂಧಾಇತ್ಯುಕ್ತ್ವಾ, ಸುಗಂಧಾಃ ಪಾಂತು ಇತಿವಾಚಯಿತ್ವಾ | ಅಕ್ಷತಾಇತ್ಯುಕ್ತ್ವಾ, ಅಕ್ಷತಂಚಾರಿಷ್ಟಂಚಾಸ್ತ್ವಿತಿವಾಚಯಿತ್ವಾ | ಪುಷ್ಪಾಣಿಪಾಂತುಇತ್ಯುಕ್ತ್ವಾ | ಸೌಶ್ರಿಯಮಸ್ತ್ವಿತಿವಾಚಯಿತ್ವಾ | ತಾಂಬೂಲಾನಿಪಾಂತುಇತ್ಯುಕ್ತ್ವಾ, ಐಶ್ವರ್ಯಮಸ್ತ್ವಿತಿವಾಚಯಿತ್ವಾ | ದಕ್ಷಿಣಾಃಪಾಂತು ಇತ್ಯುಕ್ತ್ವಾ, ಬಹುದೇಯಂಚಾಸ್ತುದೀರ್ಘಮಾ

---

ಕಂಸದವರಾಗಿಯೂ, ಪರಿಶುದ್ಧರಾಗಿಯೂ, ಮೇಲು ಹೊದಿಕೆಯನ್ನು ಹೊದೆದವರಾಗಿಯೂ, ಪವಿತ್ರವನ್ನು ಧರಿಸಿದವರಾಗಿಯೂ, ಸಮಸಂಖ್ಯಾಕರಾಗಿಯೂ ಇರುವ ಮಾಹೇಶ್ವರನನ್ನು ತನ್ನ ಇದಿರಾಗಿ ಪೂರ್ವಮುಖರನ್ನಾಗಿಯೋ ಉತ್ತರಮುಖರನ್ನಾಗಿಯೋ ಕುಳ್ಳಿರಿಸಿ, ಗಂಧಪುಷ್ಪಾದಿಗಳಿಂದವರನ್ನರ್ಚಿಸಿ, ತಮ್ಮಿಂದ ಆಶೀರ್ವಾದಗಳನ್ನು ಬೇಡುತ್ತೇನೆ ಎಂದು ಹೇಳಿ, ಸತ್ಯಾ.... ಆಯುರಸ್ತು ಎಂದು ಅವರುಗಳಿಂದ ಪ್ರತ್ಯುತ್ತರವನ್ನು ಪಡೆದು, ಮರಳಿ ಪ್ರಾಣಾಯಾಮವಂ ಮಾಡಿ, ದೇಶ ಕಾಲಗಳನ್ನು ಹೇಳಿ, "ದೀಕ್ಷಾ....ಪುಣ್ಯಾಹವಾಚನಂಕರಿಷ್ಯೆ" ಎಂದು ಸಂಕಲ್ಪಿಸಿ, ಆಪಃ ಎಂದು ಹೇಳಿ, ಶಿವಾ ಆಪಸ್ಸಂತು ಎಂದು ಮಾಹೇಶ್ವರರಿಂದ ಹೇಳಿಸಿ, ಗಂಧಾಃ ಎಂದು ತಾನು ಹೇಳಿ ಗಂಧವನ್ನವರ ಹಸ್ತಕ್ಕಿತ್ತು, ಸುಗಂಧಾಃ ಪಾಂತು ಎಂದು ಅವರಿಂದ ಹೇಳಿಸಿ, ಅಕ್ಷತಾಃ ಎಂದು ತಾನು ಹೇಳಿ, ಕೊಟ್ಟು, ಅಕ್ಷತಂ ಚಾರಿಷ್ಟಂಚಾಸ್ತು ಎಂದು ಅವರಿಂದ ಹೇಳಿಸಿ, ಪುಷ್ಪಾಣಿಪಾಂತು ಎಂದು ತಾನು ಹೇಳಿ ಹೂವನ್ನು ಕೊಟ್ಟು, ಸೌಶ್ರಿಯಮಸ್ತು ಎಂದು ಅವರಿಂದ ಹೇಳಿಸಿ, ತಾಂಬೂಲಾನಿಪಾಂತು ಎಂದು ತಾನು ಹೇಳಿ ವೀಳಯವನ್ನಿತ್ತು, ಐಶ್ವರ್ಯಮಸ್ತು ಎಂದು ಅವರಿಂದ ಹೇಳಿಸಿ, ದಕ್ಷಿಣಾಃಪಾಂತು ಎಂದು ತಾನು ಹೇಳಿ

ಯುಶ್ಶಾಂತಿಃ ಪುಷ್ಟಿಸ್ತುಷ್ಟಿಶ್ಶಾಸ್ತ್ವಿತಿ ಮಾಹೇಶ್ವರಾಃ ಪ್ರತಿಬ್ರೂಯುಃ, ಕರ್ತಾ—ಯಮಾದಿಂಕೃತ್ವಾ ಸರ್ವವೇದ ಯಜ್ಞ ಕ್ರಿಯಾರಂಭಾಶ್ಶುಭಾಃ ಪ್ರವರ್ತಂತೇ ತಮಹಮೋಂಕಾರಮಾದಿಂಕೃತ್ವಾ ಭವದ್ಭಿರನುಜ್ಞಾತಃ ಪುಣ್ಯಾಂಪುಣ್ಯಾಹಂವಾಚಯಿಷ್ಯೇ. ಮಾಹೇಶ್ವರಾಃ—ವಾಚ್ಯತಾಮಿತಿವದೇಯುಃ. ತತಸ್ಸರ್ವೈರ್ಮಾಹೇಶ್ವರೈಃ (ಭದ್ರಂಕರ್ಣೇಭಿಶ್ಶೃಣು ಯಾಮದೇವಾ ಭದ್ರಂ ಪಶ್ಯೇ ಮಾಕ್ಷಭಿರ್ಯಜತ್ರಾಃ। ಸ್ಥಿರೈರಂಗೈಸ್ತುಷ್ಟುವಾಗ್ಂ ಸಸ್ತನೂಭಿರ್ವ್ಯಶೇಮದೇವಹಿತಂ ಯದಾಯುಃ ॥) (ದ್ರವಿಣೋದಾ ದ್ರವಿಣಸಸ್ತುರಸ್ಯ ದ್ರವಿಣೋದಾಸ್ಸನರಸ್ಯಪ್ರಯಂಸತ್ । ದ್ರವಿಣೋದಾವೀರವತೀ ಮಿಷಂನೋದ್ರವಿಣೋದಾರಾಸತೇ ದೀರ್ಘಮಾಯುಃ ॥) (ಸವಿತಾಪಶ್ಚಾದಾತ್ಸವಿತಾಪುರಸ್ತಾತ್ಸವಿತೋತ್ತರಾತ್ತಾತ್ಸವಿತಾಧರಾತ್ತಾತ್ಸವಿತಾನಸ್ಸಂತು ಸರ್ವತಾತಿಂ ಸವಿತಾನೋರಾಸತಾಂ ದೀರ್ಘಮಾಯುಃ) (ನವೋನವೋಭವತಿ ಜಾಯಮಾನೋಽಹ್ನಾಂಕೇತುರುಷಸಾಮೇತ್ಯಗ್ರೇಭಾಗಂ ದೇವೇಭ್ಯೋವಿದಧಾತ್ಯಾಯನ್ ಪ್ರಚಂದ್ರಮಾಸ್ತಿರತಿ ದೀರ್ಘಮಾಯುಃ) (ಆಪಉದಂತುಜೀವಸೇ ದೀರ್ಘಾಯುತ್ವಾಯವರ್ಚಸೇ । ಯಸ್ತ್ವಾಹೃದಾಕೀರಿಣಾಮನ್ಯಮಾನೋ ಮರ್ತ್ಯಂ ಮರ್ತ್ಯೋಜೋಹವೀಮಿ ।ಜಾತವೇದೋ ಯಶೋಅಸ್ಮಾಸು ದೇಹಿ ಪ್ರಜಾಭಿರಗ್ನೇ ಅಮೃತತ್ವಮಶ್ಯಾಂ ॥ಯಸ್ಮೈತ್ವಂ ಸುಕೃತೇಜಾತವೇದಉಲೋಕಮಗ್ನೇಕೃಣವಸ್ಯೋನಂ । ಅಶ್ವಿನಂಸಪುತ್ರಿಣಂ ವೀರವಂತಗ್ಂ ಗೋಮಂತಗ್ಂರಯಿಂನ ಶತೇಸ್ವಸ್ತಿ॥ ಸಂತ್ವಾಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂಚ ದೀರ್ಘಮಾಯುಃ ॥) ಇತಿ ವಾಚಯಿತ್ವಾ, ತಂ ಕಲಶಂ ಆದಾಯೊತ್ಥಾಯೋದಙ್ಮುಖೋ ಮನಸ್ಸಮಾಧೀಯತಾಂ ಇತ್ಯುಕ್ತ್ವಾ, ಸಮಾಹಿತಮನಸಸ್ಸ್ಮಃ ಇತಿತೈರುಕ್ತೇ। ಪ್ರಸೀದಂತು ಭವಂತಃ ಇತ್ಯುಕ್ತ್ವಾ, ಪ್ರಸನ್ನಾಸ್ಸ್ಮಃ ಇತಿತೈರುಕ್ತೇ । ಸಮುಪವಿಶ್ಯ, ಉತ್ತ

---

ದಕ್ಷಿಣೆ ಕೊಟ್ಟು, ಬಹುದೇಯ........ಶ್ಶಾಸ್ತು ಎಂದು ಅವರಿಂದ ಹೇಳಿಸುವುದು. ಬಳಿಕ ಆ ಮಾಹೇಶ್ವರರೆಲ್ಲರೂ ಭದ್ರಂ....ದೀರ್ಘಮಾಯುಃ ಎಂದು ಹೇಳಿ ಆಶೀರ್ವದಿಸಲು, ಯಜಮಾನನು ಯಮಾದಿಂ....ವಾಚಯಿಷ್ಯೆ ಎಂದು ಹೇಳಿ, ವಾಚ್ಯತಾಂ ಎಂದು ಅವರಿಂದ ಹೇಳಿಸಿ, ಬಳಿಕ ತಾನು ಆ ಉತ್ತರ ದಿಕ್ಕಲಶವನ್ನು ಹಿಡಿದು ಮೇಲಕ್ಕೆದ್ದು, ಉತ್ತರಮುಖನಾಗಿ ನಿಂತು, ಮನಸ್ಸಮಾಧೀಯತಾಂ ಎಂದು ಹೇಳಿ, ಸಮಾಹಿತಮನಸಸ್ಸ್ಮಃ ಎಂದು ಅವರುಗಳು ಹೇಳಲು, ತಾನು ಪ್ರಸೀದಂತುಭವಂತಃ ಎಂದು ಹೇಳಿ, ಪ್ರಸನ್ನಾಸ್ಸ್ಮಃ ಎಂದು ಅವರು ಹೇಳಲು, ಪೀಠದ ಮೇಲೆ ಕುಳಿತು, ಉತ್ತರ ದಿಕ್ಕಲಶದ ಮೇಲಣ ಫಲವನ್ನು ತೆಗೆದಿಟ್ಟು, ಆ ಕಲಶವನ್ನು

ರಕಲಶೋಪರಿ ಸ್ಥಿತಫಲಂ ಭೂಮೌನಿಧಾಯ, ತತ್ಕಲಶಂ ಸಪಲ್ಲವಂ ಶಂಖಮುದ್ರ ಯಾಗೃಹೀತ್ವಾ, ತದುದಕಂ ಏಕಸ್ಮಿನ್ಪಾತ್ರೇ ಪ್ರತಿಮಂತ್ರಂ ಸಿಂಚೇತ್. ತತ್ರ ಮಂತ್ರಾಃ—ಶಾಂತಿರಸ್ತು | ಪುಷ್ಟಿರಸ್ತು| ತುಷ್ಟಿರಸ್ತು | ವೃದ್ಧಿರಸ್ತು | ಅವಿಘ್ನ ಮಸ್ತು | ಆಯುಷ್ಯಮಸ್ತು | ಆರೋಗ್ಯಮಸ್ತು | ಸ್ವಸ್ತ್ಯಸ್ತು | ಶಿವಂಕರ್ಮಾ ಸ್ತು | ಕರ್ಮಸಮೃದ್ಧಿರಸ್ತು | ಧರ್ಮಸಮೃದ್ಧಿರಸ್ತು | ಪುತ್ರಸಮೃದ್ಧಿರಸ್ತು | ವೇದಸಮೃದ್ಧಿರಸ್ತು | ಶಾಸ್ತ್ರಸಮೃದ್ಧಿರಸ್ತು | ಧನಧಾನ್ಯಸಮೃದ್ಧಿರಸ್ತು | ಇಷ್ಟ ಸಂಪದಸ್ತು || ತತ್ಪಾತ್ರಸ್ಯ ಬಹಿರೈಶಾನ್ಯಾಂ—ಅರಿಷ್ಟನಿರಸನಮಸ್ತು ಯತ್ಪಾಪಂ ತತ್ಪ್ರತಿಹತಮಸ್ತು" ಪುನಃಪೂರ್ವೋಕ್ತಾಸ್ಯಪಾತ್ರೇ-ಯಚ್ಛ್ರೇಯಸ್ತದಸ್ತು | ಉ ತ್ತರೇಕರ್ಮಣ್ಯವಿಘ್ನಮಸ್ತು, ಉತ್ತರೋತ್ತರಮಹರಹರಭಿವೃದ್ಧಿರಸ್ತು, ಉತ್ತರೋ ತ್ತರಾಃ ಕ್ರಿಯಾಶ್ಶುಭಾಶ್ಶೋಭನಾಃ ಪ್ರವರ್ತಂತಾಂ|ಶುಕ್ರಾಂಗಾರಕ ಬುಧ ಬೃ ಹಸ್ಪತಿ ಶನಿ ರಾಹು ಕೇತು ಸೋಮಸಹಿತಾದಿತ್ಯಪುರೋಗಾಸ್ಸರ್ವೇ ಗ್ರಹಾಃ ಪ್ರಿಯಂತಾಂ | ತಿಥಿಕರಣ ಮುಹೂರ್ತಜನ್ಮನಕ್ಷತ್ರದಿಗ್ದೇವತಾಃಪ್ರಿಯಂತಾಂ, ಮಾಹೇಶ್ವರೀಪುರೋಗಾಮಾತರಃಪ್ರಿಯಂತಾಂ, ಭಗವತೀ ಕಾತ್ಯಾಯನೀಪ್ರಿ ಯತಾಂ, ಭಗವತೀಮಾಹೇಶ್ವರೀಪ್ರಿಯತಾಂ, ಭಗವತೀ ಪುಷ್ಟಿಕರೀಪ್ರಿಯತಾಂ, ಭಗವತೀ ತುಷ್ಟಿಕರೀಪ್ರಿಯತಾಂ, ಭಗವತೀ ಋದ್ಧಿಕರೀಪ್ರಿಯತಾಂ, ಭಗವತೀ ವೃದ್ಧಿಕರೀಪ್ರಿಯತಾಂ,ಭಕ್ತಮಾಹೇಶ್ವರಾಃಪ್ರಿಯಂತಾಂ, ಸ್ವಯಂಕರ್ಮ ದೇವತಾ ತ್ಮಕೋ ಭಗವಾನ್ ಶಿವಃಪ್ರಿಯತಾಂ" ಇತಿ ಕಿಂಚಿತ್ಕಿಂಚಿದ್ವಿಸೃಜ್ಯ, ತತ್ಪಾತ್ರಬಹಿ ರ್ದೇಶೇ ನೈಋತ್ಯಾಂ-"ಹತಾಃ ಪರಿಪಂಥಿನೋ ಹತಾಅಸ್ಯಕರ್ಮಣೋವಿಘ್ನಕರ್ತಾ ರಃ ಶತ್ರವಃಪರಾಭವಂಯಾಂತು ಶಾಮ್ಯಂತುಘೋರಾಣಿ ಶಾಮ್ಯಂತುಪಾಪಾನಿ ಶಾಮ್ಯಂತ್ವೀತಯಃ" ಇತಿ ನಿಷಿಚ್ಯ. ಪುನಃಪೂರ್ವವದಸ್ಯಪಾತ್ರೇ—"ಶುಭಾನಿವ ರ್ಧಂತಾಂಶಿವಾಆಪಸ್ಸಂತು ಶಿವಾಋತವಸ್ಸಂತು ಶಿವಾಅಹುತಯಸ್ಸಂತು ಶಿವಾಓ

---

ಮಾವಿನ ಚಿಗುರುಗಳ ಸಮೇತ ಶಂಖಮುದ್ರೆಯಿಂದ ಹಿಡಿದು, ಅದರ ಉದಕವನ್ನು ಸ್ವಲ್ಪಸ್ವಲ್ಪ ವಾಗಿ ಬೇರೊಂದು ಪಾತ್ರೆಗೆ ಶಾಂತಿರಸ್ತು....ಸಂಪದಸ್ತು ಎಂದು ಹೇಳಿಕೊಂಡು ತೊಟ್ಟಿಕ್ಕಿಸಿ, ಆ ಪಾತ್ರೆಯ ಹೊರಗಡೆ ಈಶಾನ್ಯದಿಕ್ಕಿನಲ್ಲಿ ಅರಿಷ್ಟ....ಹತಮಸ್ತು ಎಂದು ಹೇಳಿ ಸ್ವಲ್ಪ ಸಂ ಪ್ರೋಕ್ಷಿಸಿ. ಮತ್ತೆ ಆ ಪಾತ್ರೆಗೆ ಮೊದಲಂತೆಯೇ ಯಚ್ಛ್ರೇಯಸ್ತದಸ್ತು....ಶಿವಃಪ್ರಿಯತಾಂ ಎಂದು ಹೇಳಿ ಸ್ವಲ್ಪಸ್ವಲ್ಪವಾಗಿ ಕಲಶೋದಕವನ್ನು ಬಿಟ್ಟು, ಆ ಪಾತ್ರೆಯ ಹೊರಗಡೆ ನೈ ಋತ್ಯದಿಕ್ಕಿನಲ್ಲಿ ಹತಾಃ........ಶಾಮ್ಯಂತ್ವೀತಯಃ ಎಂದು ಕಲಶೋದಕವನ್ನು ಸೇಚಿಸಿ, ಮರಳಿ ಆ ಪಾತ್ರೆಗೆ ಶುಭಾನಿ.... ...ಕಲ್ಪತಾಂ ಎಂದು ಸ್ವಲ್ಪಸ್ವಲ್ಪವಾಗಿ ಕಲಶೋದಕವನ್ನು

ಷಧಯಸ್ಸಂತುಶಿವಾವನಸ್ಪತಯಸ್ಸಂತು ಶಿವಾಅತಿಥಯಸ್ಸಂತು॥, ಅಹೋರಾತ್ರೇ ಶಿವೇಸ್ಯಾತಾಂ ನಿಕಾಮೇ ನಿಕಾಮೇನಃ ಪರ್ಜನ್ಯೋವರ್ಷತು ಫಲಿನ್ಯೋಓಷ ಧಯಃಪಚ್ಯಂತಾಂ ಯೋಗಕ್ಷೇಮೋನಃ ಕಲ್ಪತಾಂ) ಇತಿ ನಿಷಿಚ್ಯ, ತದುತ್ತರಕ ಲಶಂ ಪೂರ್ವವನ್ನಿಧಾಯ, ಪುಣ್ಯಾಹಂ ವಾಚಯಿಷ್ಯೇ ಇತ್ಯುಕ್ತ್ವಾ, 'ವಾಚ್ಯತಾಂ' ಇತಿ ಮಾಹೇಶ್ವರೈರುಕ್ತೇ, (ಉದ್ಗಾತೇವಶಕುನೇ ಸಾಮಗಾಯಸಿ ಬ್ರಹ್ಮಪುತ್ರ ಇವ ಸವನೇಷುಶಗ್ಂಸಸಿ ವೃಷೇವವಾಜೀ ಶಿಶುಮತೀರಪೀತ್ಯಾ ಸರ್ವತೋನ ಶ್ಶಕುನೇಭದ್ರಮಾವದ ವಿಶ್ವತೋನಶ್ಶಕುನೇ ಪುಣ್ಯಮಾವದ) (ಯಾಜ್ಯಯಾಯ ಜತಿಪ್ರತ್ತಿಗೃಹ್ಣ್ಯಯಾಜ್ಯಾ ಪುಣ್ಯೈವಲಕ್ಷ್ಮೀಃ ಪುಣ್ಯಾಮೇವತಲ್ಲಕ್ಷ್ಮೀಂ ಸಂಭಾ ವಯತಿ ಪುಣ್ಯಾಂ ಲಕ್ಷ್ಮೀಂ ಸಂಸ್ಕುರುತೇ ಯತ್ಪುಣ್ಯಂ ನಕ್ಷತ್ರಂ ತದ್ಬಟ್ಕುರ್ವೀ ತೋಪವ್ಯುಷಂ | ಯದಾವೈಸೂರ್ಯಉದೇತಿ| ಅಥನಕ್ಷತ್ರಂ ನೈತಿ| ಯಾವತಿತತ್ರ ಸೂರ್ಯೋಗಚ್ಛೇತ್|ಯತ್ರಜಘನ್ಯಂಪಶ್ಯೇತ್| ತಾವತಿಕುರ್ವೀತ ಯತ್ಕಾರೀಸ್ಯಾ ತ್ | ಪುಣ್ಯಾಹಏವಕುರುತೇ | ಓಂತಾನಿವಾಏತಾನಿ ಯಮನಕ್ಷತ್ರಾಣಿ ಯಾ ನ್ಯೇವದೇವನಕ್ಷತ್ರಾಣಿ ತೇಷುಕುರ್ವೀತ | ಯತ್ಕಾರೀಸ್ಯಾತ್ ಪುಣ್ಯಾಹಏವಕು ರುತೇ) ಇತಿ ಜುಷಂ ಸರ್ವೈಸ್ಸಹ ಪಠಿತ್ವಾ, ಮಹ್ಯಂ ಸಕುಟುಂಬಾಯ ಭಕ್ತಮಾ ಹೇಶ್ವರ ಮಹಾಜನಾನ್ನಮಸ್ಕುರ್ವಾಣಾಯಾಶೀರ್ವಚನಮಪೇಕ್ಷಮಾಣಾಯ ದೀಕ್ಷಾಕರ್ಮಣಃ ಪುಣ್ಯಾಹಂಭವಂತೋಬ್ರುವಂತ್ವಿತಿ ಸ್ವಯಂ ಮಂದ್ರಸ್ವರೇ ಣೋಕ್ತ್ವಾ, ಮಾಹೇಶ್ವರೈ ರೋಂ ಪುಣ್ಯಾಹಮಿತ್ಯುಕ್ತೇ | ಪುನರೇವಂ ಮಧ್ಯಸ್ವರೇಣೋಕ್ತ್ವಾ, ತಥೈವ ತೈರುಕ್ತೇ, ಪುನರೇವೋಚ್ಚೈಸ್ಸ್ವರೇಣೋ ಕ್ತ್ವಾ, ತಥೈವತೈರುಕ್ತೇ, (ಸ್ವಸ್ತಯೇವಾಯುಮುಪಬ್ರುವಾಮಹೈ ಸೋಮ ಗ್ಂಸ್ವಸ್ತಿ ಭುವನಸ್ಯಯಸ್ಪತಿಃ | ಬೃಹಸ್ಪತಿಂ ಸರ್ವಗಣಂಸ್ವಸ್ತಯೇ ಸ್ವಸ್ತಯ

---

ಬಿಟ್ಟು. ಆ ಕಲಶವನ್ನು ಯಥಾಸ್ಥಾನದಲ್ಲಿಟ್ಟು, ಪುಣ್ಯಾಹಂವಾಚಯಿಷ್ಯೇ ಎಂದು ತಾನು ಹೇಳಿ, ವಾಚ್ಯತಾಂ ಎಂದು ಮಾಹೇಶ್ವರರಿಂದ ಹೇಳಿಸಿ, ಬಳಿಕ ಉದ್ಗಾತೇವ....ಕುರುತೇ ಎಂಬ ಮಂತ್ರವನ್ನು ಮಾಹೇಶ್ವರರೆಲ್ಲರೊಡನೆಯೂ ಕೂಡಿ ಹೇಳಿ, ಮಹ್ಯಂ....ಪುಣ್ಯಾಹಂಭವಂ ತೋಬ್ರುವಂತು ಎಂದು ಮೆಲ್ಲಗೆ ತಾನು ಹೇಳಿ, ಅಷ್ಟೇ ಸ್ವರದಿಂದ ಓಂ ಪುಣ್ಯಾಹಂ ಎಂದು ಮಾಹೇಶ್ವರರಿಂದ ಹೇಳಿಸಿ, ಮರಳಿ ತಾನು ಇನ್ನು ಸ್ವಲ್ಪ ಗಟ್ಟಿಯಾಗಿ ಮಹ್ಯಂ....ಬ್ರುವಂತು ಎಂದು ಹೇಳಿ, ಅಷ್ಟೇಸ್ವರದಿಂದ ಓಂ ಪುಣ್ಯಾಹಂ ಎಂದು ಮಾಹೇಶ್ವರರಿಂದ ಹೇಳಿಸಿ, ಬಳಿಕ ಮತ್ತೊಂದುಸಲ ಹಾಗೆಯೇ ಗಟ್ಟಿಯಾಗಿ ತಾನೂ ಹೇಳಿ ಅವರಿಂದಲೂ ಹೇಳಿಸುವುದು. ಬಳಿಕ ಸ್ವಸ್ತಯೇ....ಮಮೃತಗ್ಂ ಸ್ವಸ್ತಿ ಎಂಬ ಮಂತ್ರವನ್ನು ಎಲ್ಲರೊಡನೆಯೂ ಕೂಡಿ ತಾನು

ಆದಿತ್ಯಾಸೋ ಭವಂತುನಃ) (ಆದಿತ್ಯಉದಯನೀಯಃ ಪಥ್ಯಯೈವೇತಸ್ಸ್ವ ಸ್ತ್ಯಾ ಪ್ರಯಂತಿ ಪಥ್ಯಾಂ ಸ್ವಸ್ತಿಮಭ್ಯುದ್ಯಂತಿ ಸ್ವಸ್ತ್ಯೈವೇತಃ ಪ್ರಯಂತಿ ಸ್ವಸ್ತ್ಯುದ್ಯಂತಿ ಸ್ವಸ್ತ್ಯುದ್ಯಂತಿ) (ಸ್ವಸ್ತಿನಇಂದ್ರೋವೃದ್ಧಶ್ರವಾಃ ಸ್ವಸ್ತಿನಃ ಪೂ ಷಾವಿಶ್ವವೇದಾಃ ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿನೋಬೃಹಸ್ಪತಿರ್ದ ಧಾತು, ಅಷ್ಟೌ ದೇವಾವಸವಸ್ಸೌಮ್ಯಾಸಚತಸ್ರೋ ದೇವಿರಜರಾಶ್ರವಿಷ್ಠಾಃ| ಶೇಯಜ್ಞಂಪಾತುರಜಸಃ ಪರಸ್ತಾತ್ | ಸಂವತ್ಸರೀಣಮಮೃತಗಾಂಸ್ವಸ್ತಿ। ಇತಿ ಋಚಂ ಸರ್ವೈಸ್ಸಹಪಠಿತ್ವಾ | ಓಂ ಸ್ವಸ್ತಿಭವಂತೋಬ್ರುವಂತ್ವಿತಿಪೂರ್ವವದು ಕ್ತ್ವಾ, ದೀಕ್ಷಾಕರ್ಮಣೆ ಸ್ವಸ್ತೀತಿತ್ರೈರುಕ್ತೆ | ಸ್ವಸ್ತಿದೀಕ್ಷಾಕರ್ಮಣೇಭವಂ ತೋಬ್ರುವಂತ್ವಿತಿ ಕರಿಷ್ಯಮಾಣಕರ್ಮನಾಮ ಪೂರ್ವವದುಕ್ತ್ವಾ | ದೀಕ್ಷಾಕ ರ್ಮಣೆ ಸ್ವಸ್ತೀತಿತ್ರೈರುಕ್ತೆ, ಪುನರೇಕವಾರಂ ತಥೈವೋಕ್ತ್ವಾವಾಚಯಿತ್ವಾ, (ಋ ಧ್ಯಾಮಸ್ತೋಮಗ್ಂಸನುಯಾಮ ವಾಜಮಾನೋ ಮಂತ್ರಗ್ಂ ಸರಥೇಹೋ ಪಯಾತಂ | ಯಶೋನಪಕ್ವಂ ಮಧುಗೋಷ್ವಂತರಾಭೂತಾಂಶೋ ಅಶ್ವಿನೋಃ ಕಾಮಮಪ್ರಾಃ ।ಸರ್ವಾವೃದ್ಧಿ ವೃಧ್ನುಯಾಮಿತಿ ತಂವೈ ತೇಜಸೈವ ಪುರಸ್ತಾ ತ್ಪರ್ಯಭವಚ್ಛಂದೋಭಿರ್ಮಧ್ಯತೋಽಕ್ಷರೈರುಪರಿಷ್ಟಾದ್ಗಾಯತ್ರ್ಯಾ ಸರ್ವ ತೋಽಪ್ಯಾದಶಾಹಂ ಪರಿಭೂಯಸಾ ತ್ಸರ್ವಾವೃದ್ಧಿಮಾರ್ಧ್ನೋತ್ ತ್ಸರ್ವಾವೃದ್ಧಿ ವೃಧ್ನೋತಿ ಯಏವಂವೇದ || ಋಧ್ಯಾಸ್ಮ ಹವ್ಯೈರ್ನಮಸೋಪಸದ್ಯ ಮಿತ್ರಂ ದೇವಂ ಮಿತ್ರಧೇಯಂನೋಅಸ್ತು || ಅನೂರಾಧಾನ್ ಹವಿಷಾವರ್ಧಯಂತಃ | ಶತಂಜೀವೇಮಶರದಸ್ಸವೀರಾಃ| ತ್ರೀಣಿತ್ರೀಣಿವೈದೇವಾನಾಮೃದ್ಧಾನಿ| ತ್ರೀ ಣಿಛಂದಾಗ್ಂಸಿ ತ್ರೀಣಿಸವನಾನಿ | ತ್ರಯಇಮೇಲೋಕಾಃ | ಋದ್ಧ್ಯಾಮೇವ ತದ್ವೀರ್ಯ ಏಷುಲೋಕೇಷು ಪ್ರತಿತಿಷ್ಠತಿ ||) ಇತಿ ಋಚಂ ಸರ್ವೈಸ್ಸಹಪಠಿ ತ್ವಾ, ಋದ್ಧಿಂಭವಂತೋಬ್ರುವಂತ್ವಿತಿ ಪೂರ್ವವದುಕ್ತೇ | ಓಂ ಋಧ್ಯತಾಮಿತಿ ತ್ರೈಃಪ್ರತ್ಯುಕ್ತೆ | (ಶ್ರಿಯೇಜಾತಶ್ಶ್ರಿಯ ಆನಿರಿಯಾಯಶ್ರಿಯಂ ವಯೋ ಜರಿತೃಭ್ಯೋದಧಾತಿ | ಶ್ರಿಯಂವಸಾನಾ ಅಮೃತತ್ವಮಾಯಸ್ಭವಂತಿ ಸತ್ಯಾಸ

---

ಹೇಳಿ, ದೀಕ್ಷಾಕರ್ಮಣೇ ಸ್ವಸ್ತಿ ಭವಂತೋಬ್ರುವಂತು ಎಂದು ತಾನು ಉಚ್ಚರಿಸಿ, ಓಂಸ್ವಸ್ತಿ ಎಂದು ಅವರಿಂದ ಹೇಳಿಸಿ, ಹೀಗೆ ಮೂರಾವೃತ್ತಿ ನಡೆಯಿಸಿ, ಋಧ್ಯಾಮ....ಪ್ರತಿತಿಷ್ಠತಿ ಎಂಬ ಋಕ್ಕನ್ನು ಸರ್ವ ಮಾಹೇಶ್ವರರೊಡನೆ ಕೂಡಿ ಹೇಳಿ, ದೀಕ್ಷಾಕರ್ಮಣೇ ಋದ್ಧಿಂಭವಂ ತೋಬ್ರುವಂತು ಎಂದು ತಾನು ಹೇಳಿ, ಓಂ ಋಧ್ಯತಾಂ ಎಂದು ಅವರುಗಳಿಂದ ಹೇಳಿಸಿ, ಹಾಗೆಯೇ ಮತ್ತೆರಡುಸಲ ನೆರವೇರಿಸಿ, ಶ್ರಿಯೆ....ರನೂನಾಃ ಎಂಬ ಋಕ್ಕನ್ನು ಸರ್ವರೊಡನೆ

ಮಿಥಾಮಿತದ್ಧೌ || ಶ್ರಿಯಏವೈವಂ ತಚ್ಛ್ರಿಯಮಾದಧಾತಿ ಸಂತತಮೃಚಾವಷಟ್ಕೃತಂ | ಸಂತತ್ಯೈ ಸಂಧೀಯತೇ) ಪ್ರಜಯಾಪಶುಭಿರ್ಯಏವಂವೇದ | ಋಚಸ್ಸಾಮಾನಿಯಜೂಗ್ಂಷಿ ಸಾಹಿಶ್ರೀರಮೃತಾಸತಾಂ || ಶುಕ್ರೇಭಿರಂಗೈರಜಆತತನ್ವಾನ್ಕ್ರತುಂ ಪುನಾನಃ ಕವಿಭಿಃ ಪವಿತ್ರೈಃ | ಶೋಚಿರ್ವಸಾನಃ ಪರ್ಯ್ಯಾಯುರಪಾಂ ಶ್ರಿಯೋಮಿಮೀತೇ ಬೃಹತೀರನೂನಾಃ ||) ಇತಿ ಋಚಂಸರ್ವೈಸ್ಸಹಪಠಿತ್ವಾ, ಮಹ್ಯಂ ಸಕುಟುಂಬಾಯ ಭಕ್ತಮಾಹೇಶ್ವರಮಹಾಜನಾನ್ನಮಸ್ಕುರ್ವಾಣಾಯಾಶೀರ್ವಚನಮಪೇಕ್ಷಮಾಣಾಯ ದೀಕ್ಷಾಕರ್ಮಣಃ ಶ್ರೀರಸ್ತ್ವಿತಿಭವಂತೋಬ್ರುವಂತು. "ಅಸ್ತು ಶ್ರೀಃ" ಇತಿತೈರುಕ್ತೇ, ಕರ್ಮದೇವತಾತ್ಮಕೋಭಗವಾನ್ ಸಾಂಬಸದಾಶಿವಃ ಪ್ರಿಯತಾಮಿತಿ ಭವಂತೋಬ್ರುವಂತು ಇತಿ ಪೂರ್ವವದ್ವದೇತ್. ಪ್ರಿಯತಾಂ ಭಗವಾನ್ ಕರ್ಮದೇವತಾತ್ಮಕಃ ಸದಾಶಿವಃ, ವರ್ಷಶತಂ ಸಂಪೂರ್ಣಮಸ್ತು ಗೋತ್ರಾಭಿವೃದ್ಧಿರಸ್ತು ಶಿವಂ ಶಿವಮಸ್ತು ಇತಿ ಮಾಹೇಶ್ವರಾಃ ಪ್ರತಿಬ್ರೂಯುಃ. ಏವಂತ್ರಿಃ. ತತಃಕರ್ತ್ತಾ ಸಾಮಾತ್ಯಃ ಪ್ರಾಙ್ಮುಖ ಉಪವಿಶೇತ್ | ತತೋಮಾಹೇಶ್ವರಾ ಉದಙ್ಮುಖಾಸ್ಸಮುಪವಿಶೇಯುಃ. ಯಜಮಾನಃ ಉತ್ತರಕಲಶಂ ದಕ್ಷಿಣಹಸ್ತೇ ದಕ್ಷಿಣಕಲಶಂ ವಾಮಹಸ್ತೇ ಗೃಹೀತ್ವಾ, ತಾಭ್ಯಾಂ ಧಾರಾದ್ವಯಮೇಕೀಕೃತ್ಯ ಪೂರ್ವಸ್ಮಿನ್ ಪಾತ್ರೆ ಸಂತತಧಾರಯಾ ನಿಷಿಂಚೇತ್ (ವಾಸ್ತೋಷ್ಪತೇ ಪ್ರತಿಜಾನೀಹ್ಯಸ್ಮಾಂಥ್ಸ್ವಾವೇಶೋಅನಮೀವೋಭವಾನಃ || ಯತ್ವೇಮಹೇಪ್ರತಿತನ್ನೋಜುಷಸ್ವ | ಶನ್ನೋಭವದ್ವಿಪದೇತಂಚತುಷ್ಪದೇ || ವಾಸ್ತೋಷ್ಪತೇ ಪ್ರತರಣೋ ಸಏಧಿಗಯಸ್ಫಾನೋ ಗೋಭಿರಶ್ವೇಭಿರಿಂದೋ ಅಜರಾಸಸ್ತೇಸಖ್ಯೇ ಸ್ಯಾಮ ಪಿತೇವ ಪುತ್ರಾನ್ಪ್ರತಿನೋಜುಷಸ್ವ|

---

ತಾನೂ ಹೇಳಿ, ಮಹ್ಯಂ....ಶ್ರೀರಸ್ತ್ವಿತಿಭವಂತೋ ಬ್ರುವಂತು ಎಂದು ಹೇಳಿ, ಅಸ್ತು ಶ್ರೀಃ ಎಂದು ಮಾಹೇಶ್ವರರಿಂದ ಹೇಳಿಸಿ, ಕರ್ಮದೇವತಾತ್ಮಕಃ ಭಗವಾನ್ ಶ್ರೀಸಾಂಬಸದಾಶಿವಃ ಪ್ರಿಯತಾಮಿತಿಭವಂತೋ ಬ್ರುವಂತು ಎಂದು ತಾನು ಹೇಳಿ, ಪ್ರಿಯತಾಂ ಭಗವಾನ್ ಕರ್ಮದೇವತಾತ್ಮಕಃ ಸದಾಶಿವಃ....ಶಿವಮಸ್ತು ಎಂದು ಅವರಿಂದ ಹೇಳಿಸುವುದು.

ಬಳಿಕ ಯಜಮಾನನು ವಟುವಿನೊಡನೆ ಕೂಡಿ ಪೂರ್ವಮುಖನಾಗಿ ಕುಳಿತುಕೊಂಡು ಮಾಹೇಶ್ವರರನ್ನು ಉತ್ತರಮುಖರನ್ನಾಗಿ ಕುಳ್ಳಿರಿಸುವುದು. ಮತ್ತು ಆ ಕಲಶಗಳೆರಡರಲ್ಲಿ ಉತ್ತರದಿಕ್ಕಲಶವನ್ನು ಬಲಗೈಯಲ್ಲೂ, ದಕ್ಷಿಣದಿಕ್ಕಲಶವನ್ನು ಎಡಗೈಯಲ್ಲೂ ಹಿಡಿದು ಮೇಲಕ್ಕೆತ್ತಿ ಸಮನಾಗಿ ಜೋಡಿಸಿಕೊಂಡು ಎರಡರ ಧಾರೆಯೂ ಕೂಡಿ ಒಂದಾಗಿ ಬೀಳುವಂತೆ ಮಾಡಿ ಆ ಮೊದಲ ಪಾತ್ರೆಗೆ "ವಾಸ್ತೋಷ್ಪತೇ....ಪ್ರಿಯತಾಂ" ಎಂಬ ಮಂತ್ರಗಳಿಂದ ಎರೆಯ

ವಾಸ್ತೋಷ್ಪತೇ ಶಗ್ಮಯಾಸಂ ಸದಾತೇಸಕ್ಷೀಮಹಿರಣ್ವಯಾಗಾತುಮತ್ವಾ | ಪಾಹಿಕ್ಷೇಮಉತಯೋಗೇ ವರಂನೋಯೂಯಂಪಾತಸ್ವಸ್ತಿಭಿಸ್ಸದಾನಃ | ಅಮೀವಹಾವಾಸ್ತೋಷ್ಪತೇ ವಿಶ್ವಾರೂಪಾಣ್ಯಾವಿಶನ್ ಸಖಾಸುಶೇವ ಏಧಿನಃ) ಛಷಧಾನಿಚರತ್ನಾನಿ ಕಾಲಸ್ಯಾವಯವಾಶ್ಚಯೆ | ಸರಿತಸ್ಸಾಗರಾಶ್ಶೈಲಾಸ್ತೀರ್ಥಾನಿಚಹ್ರದಾನದಾಃ | ಏತೇತ್ವಾಮಭಿಷಿಂಚಂತು ಸರ್ವಕಾಮಾರ್ಥಸಿದ್ಧಯೆ| ಶಾಂತಿಃಪುಷ್ಟಿಸ್ತುಷ್ಟಿಶ್ಚಾಸ್ತು| ಶಿವಗ್ಂ ಶಿವಮಸ್ತು | ಭಗವಾನ್ ಶಿವಃಪ್ರಿಯತಾಂ ಇತಿ || ತತೋಮಾಹೇಶ್ವರಾಃ ತದ್ವೃದ್ಧಿಕಲಶೋದಕಂ ವಿಶಾಲೇ ತಾಮ್ರಾದಿಪಾತ್ರೇ ಸಿಸೀಯ, ಯಜಮಾನಂ ಸಾಮಾತ್ಯಂ ಮಂತ್ರೈಃ ಅಭಿಷಿಂಚೇಯುಃ | ತೇಚಮಂತ್ರಾಃ—(ತತ್ಸವಿತುರ್ವರೇಣ್ಯಂ ವಿಶ್ವಾಮಿತ್ರಸ್ಸವಿತಾಗಾಯತ್ರೀ | ಆಪೋಹಿಷ್ಠೇತಿನವರ್ಚಸ್ಯಾಂಬರೀಷಃ | ಸಿಂಧುದ್ವೀಪಾ ಆಪೋಗಾಯತ್ರೀ | ಪಂಚಮೀವರ್ಧಮಾನಾ ಸಪ್ತಮೀಪ್ರತಿಷ್ಠೇಂತ್ಯೇದ್ವೇಅನುಷ್ಟುಭೌ|| ಆಪೋಹಿಷ್ಠಾಮಯೊಭುವಸ್ತಾನ ಊರ್ಜೆದಧಾತನಮಹೇರಣಾಯಚಕ್ಷಸೇ | ಯೋವಶ್ಶಿವತಮೋರಸಸ್ತಸ್ಯಭಾಜಯತೆಹನಃ | ಉಶತೀರಿವಮಾತರಃ ತಸ್ಮಾಅರಂಗಮಾಮವೋಯಸ್ಯಕ್ಷಯಾಯಜಿನ್ವಥ | ಆಪೋಜನಯಥಾಚನಃ || ಶಂನೋದೇವೀರಭೀಷ್ಟಯೇ ಆಪೋಭವಂತುಪೀತಯೇ ಶಂಯೋರಭಿಸ್ರವಂತುನಃ || ದೇವಸ್ಯತ್ವಾಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋಹಸ್ತಾಭ್ಯಾಮಶ್ವಿನೋರ್ಭೈಷಜ್ಯೇನ ಅಗ್ನೇಸ್ತೇಜಸಾಸೂರ್ಯಸ್ಯವರ್ಚಸ್ಯೇಂದ್ರಸ್ಯೇಂದ್ರಿಯೇಣ ಶ್ರಿಯೈಯಶಸೇಬಲಾಯಾಭಿಷಿಂಚಾಮಿ | ಬಲಾಯಶ್ರಿಯೈಯಶಸೇನ್ನಾದ್ಯಾಯ ಭೂರ್ಭುವಸ್ಸುವರೋಂ ಅಮೃತಾಭಿಷೇಕೋಽಸ್ತು) ಇತಿ ಸಪಲ್ಲವೈರಭಿಷಿಂಚೇಯುಃ || ತತಃ ಕರ್ತಾ ಮಾಹೇಶ್ವರೇಭ್ಯೋ ದಕ್ಷಿಣಾಂ ದತ್ವಾ, ತಜ್ಜಲೇನ ಪ್ರಾಚ್ಯಾಂದಿಶಿ—ದೇವಾ ಋತ್ವಿಜೋಮಾರ್ಜಯಂತಾಂ, ದಕ್ಷಿಣಸ್ಯಾಂದಿಶಿ—ಮಾಸಾಃ ಪಿತರೋಮಾರ್ಜಯಂತಾಂ, ಪ್ರತೀಚ್ಯಾಂದಿಶಿ—ಗೃಹಾಃ ಪಶವೋಮಾರ್ಜಯಂತಾಂ, ಉದೀಚ್ಯಾಂದಿಶಿ—ಆಪಓಷಧಯೋ ವನಸ್ಪತಯೋ ಮಾ

---

ಬೇಕು. ಬಳಿಕ ಮಾಹೇಶ್ವರರುಗಳು ಆ ಎರೆದ ಕಲಶೋದಕವನ್ನು ಬೇರೊಂದು ಪಾತ್ರೆಗೆ ಬಗ್ಗಿಸಿಕೊಂಡು ಯಜಮಾನನಮೇಲೂ ಪಟುವಿನಮೇಲೂ ದರ್ಭಕೂರ್ಚಾದಿಗಳಿಂದ "ತತ್ಸವಿತು....ಅಮೃತಾಭಿಷೇಕೋಸ್ತು" ಎಂಬ ಮಂತ್ರವನ್ನು ಹೇಳಿಕೊಂಡು ಸಂಪ್ರೋಕ್ಷಿಸುವುದು. ಅನಂತರ ಯಜಮಾನನು ಮಾಹೇಶ್ವರರುಗಳಿಗೆ ದಕ್ಷಿಣೆಯನ್ನಿತ್ತು ಆ ಪಾತ್ರದಲ್ಲಿರುವ ತೀರ್ಥಜಲವನ್ನು ಕೂರ್ಚದಿಂದ ಪೂರ್ವಾದಿ ದಿಕ್ಕುಗಳಲ್ಲಿ ದೇವಾ ಋತ್ವಿಜೋಮಾರ್ಜಯಂ

ರ್ಜಯಂತಾಂ, ಊರ್ಧ್ವಾರ್ಯಾಂದಿಶಿ—ಯಜ್ಞಸ್ಸಂವತ್ಸರೋ ಯಜ್ಞಪತಿರ್ಮಾರ್ಜಯಂತಾಂ, ಇತಿ ನಿಷಿಂಚೇತ್. ಶುಭಗ್‌ಂ ಶುಭಗ್‌ಂಸ್ವಸ್ತಿ, ಪುಣ್ಯಾಹಸಮೃದ್ಧಿರಸ್ತು. ತತೋಮಾಹೇಶ್ವರೇಭ್ಯೋ ವೈದಿಕ ಆಶಿಷೋ ಗೃಹೀತ್ವಾ, ತೈರ್ದತ್ತಾಕ್ಷತಪುಷ್ಪಾದಿಕಂ ಶಿರಸಿ ಧಾರಯೇತ್ ||

ಅಥ ನಾಂದೀಸಮಾರಾಧನಂ.

ತಂಡುಲಪೂರಿತಪಾತ್ರೇ ಫಲಂನಿಧಾಯ ಚತುರ್ವಿಂಶತಿಮಾಹೇಶ್ವರಾರಾಧನಪರಿಮಿತಂ ಹಿರಣ್ಯಂದದ್ಯಾತ್ || ತದ್ಯಥಾ || ದೇಶಕಾಲೌ ಸಂಕೀರ್ತ್ಯ, ಅಸ್ಯಾಂ ಶುಭತಿಥೌ ,,ಆದೌ ನಾಂದೀಶೋಭನ ದೇವತಾಪ್ರೀತ್ಯರ್ಥಂ ನಾಂದೀಸಮಾರಾಧನಂಕರಿಷ್ಯೇ,, ಇತಿ ಸಂಕಲ್ಪ್ಯ—ಶ್ರೀನಂದಿ, ಭೃಂಗಿರಿಟಿ, ವೀರಕ, ವೀರಭದ್ರ, ಪುಷ್ಪದಂತ, ಅಂಡಾಭರಣ, ದಂಡಪಾಣಿ, ಚಂಡೇಶ್ವರ, ದಾರುಕ, ರೇಣುಕ, ವಿಕರ್ಣ, ವಿಜಯಕರ್ಣ, ಘಂಟಾಕರ್ಣ, ರೇಣುಕರ್ಣ, ಗೋಕರ್ಣ, ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ಸುಕೇತು, ರುರು, ಉಪಮನ್ಯು, ಭೃಗು, ದಧೀಚಿ, ಗೌತಮಾದಿಪ್ರಮಥಗಣಾನ್ ಪುರಾತನಭಕ್ತ ಮಹಾಗಣಾನತ್ರಾವಾಹಯಾಮಿ, ನಂದ್ಯಾದಿ ಮಹಾಗಣಾಸ್ಸಾಯುಧಾಸ್ಸಶಕ್ತಯಸ್ಸಪರಿವಾರಾಸ್ಸಮಾಗತ್ಯಾತ್ರಪೂಜಾಂ ಭವಂತೋ ಗೃಹ್ಣಂತು ಇತಿ ವಿಜ್ಞಾಪ್ಯ, ಅಷ್ಟವಿಧಾರ್ಚನಂಕುರ್ಯಾತ್ || ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂವಿಭಾವಸೋಃ | ಅನಂತಪುಣ್ಯಫಲದಮತಶ್ಶಾಂತಿಂಪ್ರಯಚ್ಛಮೇ || ಅನೇನಹಿರಣ್ಯೇನ ನಾಂದೀಶೋಭನದೇವತಾಃ ಪ್ರೀಯಂತಾಂ ಇತಿ ದ್ರವ್ಯಂದದ್ಯಾತ್|| ಚತುರ್ವಿಂಶತಿಮಾಹೇಶ್ವರಾರಾಧನಂಕುರ್ಯಾತ್. ಇತಿ ನಾಂದೀವಿಧಾನಂ ||

---

ತಾಂ ಇತ್ಯಾದಿ ಆಯಾ ಮಂತ್ರಗಳಿಂದ ಸಂಪ್ರೋಕ್ಷಿಸಬೇಕು. ಮಾಹೇಶ್ವರರು ವೇದಮಂತ್ರಗಳಿಂದ ಆಶೀರ್ವದಿಸಿ ಪ್ರಸಾದಾಕ್ಷತ ಪುಷ್ಪಗಳನ್ನು ಕೊಡಲು ಅವನ್ನು ಯಜಮಾನನು ಸಂಗ್ರಹಿಸಿ ಶಿರಸ್ಸಿನಲ್ಲಿ ಧರಿಸಿಕೊಳ್ಳಬೇಕು.

ನಾಂದೀಸಮಾರಾಧನವು.

ಒಂದು ತಟ್ಟೆಯಲ್ಲಿ ಅಕ್ಕಿಯನ್ನು ತುಂಬಿ ಅದರಲ್ಲಿ ಫಲ ತಾಂಬೂಲಗಳನ್ನಿಟ್ಟು ೨೪ ಅಡೆಯನ್ನಾಗಲಿ ಅಥವಾ ೨೪ ಕಾಸನ್ನಾಗಲಿ ಇಟ್ಟು ಸಂಕಲ್ಪವನ್ನು ಮಾಡಿ ಶ್ರೀನಂದಿ....... ಆವಾಹಯಾಮಿ ಎಂದು ಆವಾಹಿಸಿ, ಅಷ್ಟವಿಧಾರ್ಚನೆಯಂ ಮಾಡಿ, ಹಿರಣ್ಯ......ಪ್ರೀಯತಾಂ ಎಂದು ಮಾಹೇಶ್ವರರಿಗೆ ದಾನವಂ ಮಾಡುವುದು.

## ಅಥಾಂಕುರಾರ್ಪಣಂ.

ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, ದೀಕ್ಷಾಕರ್ಮಸಾಫಲ್ಯ ನಿರಂತರಶುಭತ್ವಸಿದ್ಧಿದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಅಂಕುರಾರ್ಪಣಂ ಕರಿಷ್ಯೇ, ಇತಿಸಂಕಲ್ಪ್ಯ— ಶುದ್ಧಭೂಮಿಂ ಗೋಮಯೇನೋಪಲಿಪ್ಯ, ರಂಗವಲ್ಲ್ಯಾದಿಭಿರಲಂಕೃತ್ಯ, ತತ್ರ ಸಿತಾಕ್ಷತಾನ್ ಪ್ರಕೀರ್ಯ, ತದುಪರಿ ದೂರ್ವಾಂಕುರಾಶ್ವತ್ಥಶಿರೀಷ ಬಿಲ್ವಪತ್ರಾಣ್ಯವಕೀರ್ಯ, ಸುಧಾಲಿಪ್ತಶ್ವೇತತಂತುವೇಷ್ಟಿತ ಪಂಚಪಾಲಿಕಾಸ್ಸಂಸ್ಥಾಪ್ಯ, ವಲ್ಮೀಕಮೃದಂ ಹ್ರದಪಂಕಂ ಶುಷ್ಕಗೋಮಯಚೂರ್ಣಂ ತತ್ರ ನಿಕ್ಷಿಪ್ಯ. ಪಾಲಿಕಾಮೂಲಂ ಶ್ವೇತತಂಡುಲೈಃ ಪೂರಯಿತ್ವಾ, ತತ್ರ ಸಿತರಕ್ತಹರಿದ್ವರ್ಣಾದಿಪುಷ್ಪಾಣ್ಯವಕೀರ್ಯ, ಮಧ್ಯಾದಿಪಂಚಸ್ಥಾನೇಷು ಈಶಾನಾದಿಪಂಚಮೂರ್ತೀನಾವಾಹ್ಯ ಸಮ್ಯಗಭ್ಯರ್ಚ್ಯ, ಪಾಲಿಕಾಪಶ್ಚಿಮತಃ ಪ್ರಾಙ್ಮುಖಸ್ಸನ್ ಉಪತಿಷ್ಠೇತ್ ‖ ದಿಶಾಂಪತೀನ್ನಮಸ್ಯಾಮಿ ಸರ್ವಕಾಮಫಲಪ್ರದಾನ್ | ಕುರ್ವಂತು ಸತತಂಕರ್ಮ ಕುರ್ವಂತು ಸತತಂಶುಭಂ ‖ ತತಃ ವ್ರೀಹಿ, ಮುದ್ಗ, ಚಣಕ, ತಿಲ, ಗೋಧೂಮ, ಪಂಚಧಾನ್ಯಾನಿ ತೋಯೇನ ಪ್ರಕ್ಷಾಳ್ಯ ಮಧ್ಯಮಾದಿಪಂಚಪಾಲಿಕಾಸು ಸಮಂತ್ರಕಂ ವಾಪಯೇತ್. ತತ್ರ ಈಶಾನಾದಿಪಂಚಬ್ರಹ್ಮಮಂತ್ರಾಃ (ಆಪೋಹಿಷ್ಠಾಮಯೋಭುವಸ್ತಾನಊರ್ಜೇದಧಾತನ ಮಹೇರಣಾಯ ಚಕ್ಷಸೆ ಯೋವಶ್ಶಿವತಮೋ ರಸಸ್ತಸ್ಯ ಭಾಜಯತೇಹನಃ| ಉಶತೀರಿವಮಾತರಃ| ತಸ್ಮಾ ಅರಂಗಮಾಮವೋಯಸ್ಯಕ್ಷಯಾಯ ಜಿನ್ವಥ ಆಪೋಜನಯಥಾಚನಃ)

---

## ಅಂಕುರಾರ್ಪಣವು.

ಆಚಾರ್ಯನು ಪ್ರಾಣಾಯಾಮವಂ ಮಾಡಿ ದೇಶಕಾಲಗಳನ್ನು ಹೇಳಿ ದೀಕ್ಷಾ....ಅಂಕುರಾರ್ಪಣಂ ಕರಿಷ್ಯೇ ಎಂದು ಸಂಕಲ್ಪಿಸಿ, ಸಾರಿಸಿ ಪರಿಶುದ್ಧವಾಗಿ ರಂಗವಲ್ಲಿಯನ್ನು ಬಿಟ್ಟಿರುವ ಭೂಮಿಯಲ್ಲಿ ಬಿಳಿಯ ಅಕ್ಕಿಯನ್ನು ಹರಡಿ, ಅದರ ಮೇಲೆ ಗರುಕೆ ಅರಳಿಯ ಚಿಗುರು ಬಿಲ್ವಪತ್ರೆಗಳನ್ನು ಹಾಸಿ, ಬಿಳಿಯ ನೂಲನ್ನು ಸುತ್ತಿ ಸುಣ್ಣ ಒಳಿದಿರುವ ೫ ಪಾಸಾಲಿಗಳನ್ನಿಟ್ಟು, ಹುತ್ತದಮಣ್ಣು, ಹಳ್ಳದ ಕೆಸರು, ಒಣಗಿದ ಸಗಣಿಯ ಹುಡಿಯನ್ನೂ ಸಹ ಅದರಲ್ಲಿ ತುಂಬಿ, ನಾನಾ ವರ್ಣದ ಪುಷ್ಪಗಳನ್ನು ಅದರಲ್ಲಿ ಹರಡಿ, ಮಧ್ಯದ ಪಾಸಾಲಿಯಲ್ಲೂ, ಪೂರ್ವಾದಿ ನಾಲ್ಕು ದಿಕ್ಕುಗಳ ಪಾಸಾಲಿಗಳಲ್ಲೂ ಈಶಾನಾದಿ ಪಂಚಮೂರ್ತಿಗಳನ್ನು ಆಯಾ ಮಂತ್ರದಿಂದ ಆವಾಹಿಸಿ, ಷೋಡಶೋಪಚಾರದಿಂದ ಪೂಜಿಸಿ, ಪಾಸಾಲಿಗಳ ಪಶ್ಚಿಮದ ಕಡೆ ಕುಳಿತು, ದಿಶಾಂ...ಶುಭಂ ಎಂದು ನಮಸ್ಕರಿಸಿ, ಬತ್ತ, ಹೆಸರು, ಕಡಲೆ, ಎಳ್ಳು, ಗೋಧಿ ಈ ಐದು ಧಾನ್ಯಗಳನ್ನು ನೀರಿನಿಂದ ತೊಳೆದು, ಈಶಾನಾದಿಯಾದ ಪಂಚಬ್ರಹ್ಮ ಮಂತ್ರವನ್ನು

ಅನೇನ ಕಳಶೋದಕಂ ಪಾಲಿಕಾಸು ನಿಷಿಂಚ್ಯ, ಅಷ್ಟವಿಧಾರ್ಚನಂ ಕುರ್ಯಾತ್॥

## ಮಂಟಪದೇವತಾಪ್ರತಿಷ್ಠಾ.

ದೇಶಕಾಲೌ ಸಂಕೀರ್ತ್ಯ, ಕರಿಷ್ಯಮಾಣದೀಕ್ಷಾಕರ್ಮಾಂಗಭೂತ ಮಂಟಪದೇವತಾಪ್ರತಿಷ್ಠಾಪನಂಕರಿಷ್ಯೇ ಇತಿ ಸಂಕಲ್ಪ್ಯ, ಸರ್ವೈರನುಜ್ಞಾಯ (ಯಾಜಾತಾ ಓಷಧಯೋ ದೇವೇಭ್ಯಸ್ತ್ರಿಯುಗಂಪುರಾ ತಾಸಾಂ ಪರ್ವರಾಭ್ಯಾಂ ಸಂಪರಿಸ್ತರಮಾಹರ್ | ಮಂದಾಮಿಬಭ್ರೂಣಾಮಹಗ್ಂ ಶತಂಧಾಮಾನಿಸಪ್ತಚ| ಶತಂವೋಅಂಬಧಾಮಾನಿ ಸಹಸ್ರಮುತವೋರುಹಃ | ಅಥಶತಕ್ರತ್ವೋಯೂಯಮಿಮಂಮೇಅಗದಂಕೃತ ॥ ಪುಷ್ಪಾವತೀಃ ಪ್ರಸೂವತೀಃ ಫಲಿನೀರಫಲಾಉತ | ಅಶ್ವಾಇವಸಜಿತ್ವರೀ ರ್ವೀರುಧಃಪಾರಇಷ್ಣವಃ | ಯಾಃಫಲಿನೀರ್ಯಾ ಅಫಲಾಅಪುಷ್ಪಾಯಾಶ್ಚಪುಷ್ಪಿಣೀಃ | ಬೃಹಸ್ಪತಿಪ್ರಸೂತಾಸ್ತಾನೋಮುಂಚತ್ವಗ್ಂಹಸಃ) ಇತಿ ಮಂಟಪೋಪರಿ ಅಕ್ಷತಾನ್ನಿಕ್ಷಿಪ್ಯ, ಶತರುದ್ರಾನಾವಾಹಯೇತ್ ॥ ತದೇವಮಿಂದ್ರದಿಶಿ— (ತ್ರಾತಾರಮಿಂದ್ರಮವಿತಾರಮಿಂದ್ರಗ್ಂಹವೇಹವೇ ಸುಹವಗ್ಂ ಶೂರಮಿಂದ್ರಂ ಹವೇನುಶಕ್ರಂ ಪುರುಹೂತಮಿಂದ್ರಗ್ಂ ಸ್ವಸ್ತಿನೋಮಘವಾಧಾತ್ವಿಂದ್ರಃ, ಅನೇನ ಇಂದ್ರಂ | ಕಪಿಲೇಶಾಯನಮಃ | ಅಜಾಯನಮಃ | ಬದ್ಧಾಯನಮಃ | ವಜ್ರದೇಹಾಯನಮಃ | ಪ್ರಮರ್ದನಾಯನಮಃ | ವಿಭೂತಯೇನಮಃ | ಅವ್ಯಯಾಯನಮಃ | ಶಾಸ್ತ್ರೇನಮಃ | ಪಿನಾಕಿನೇನಮಃ | ತ್ರಿದಶಾಧಿಪಾಯನಮಃ | ಇಂದ್ರವೀರ್ಯಾಃ ಇಂದ್ರಪೂಜಿತಾಃ ಹೇದಶರುದ್ರಾಃ ಸವಾಹನಾಸ್ಸಶಕ್ತಯಸ್ಸಪರಿವಾರಾ ಸ್ಸಮಾಗತ್ಯಾತ್ರ ಮಂಟಪೇ ಮತ್ಕೃತಾನಶೇಷೋಪಚಾರಾಂತ್ಸ್ವೀಕೃತ್ಯ ಪ್ರಸೀದಂತು ಭವಂತಃ ಇತ್ಯಾವಾಹ್ಯ ॥ ಪೂಜಯೇತ್ ॥ ಅಥಾಗ್ನೇಯಾಂದಿಶಿ ॥— (ತ್ವಂನೋಅಗ್ನೇವರುಣಸ್ಯ ವಿದ್ವಾನ್ದೇವಸ್ಯಹೇಡೋ ಅವಯಾಸಿಸೀಷ್ಠಾಃ ॥ ಯಜಿಷ್ಠೋವಹ್ನಿತಮ

---

ಹೇಳಿ, ಬಿತ್ತಿ, ಆಪೊ....ಯಥಾಚನಃ ಎಂದು ಕಲಶದಲ್ಲಿರುವ ನೀರನ್ನು ಎರೆದು ಅಷ್ಟವಿಧ ಪೂಜೆಯನ್ನು ಮಾಡುವುದು.

## ಮಂಟಪದೇವತಾಪ್ರತಿಷ್ಠೆ.

ಅನಂತರ ಯಜಮಾನನು ದೀಕ್ಷಾಕರ್ಮಾಂಗವಾದ ಮಂಟಪ ದೇವತಾಪ್ರತಿಷ್ಠೆಯನ್ನು ಮಾಡುತ್ತೇನೆಂದು ಸಂಕಲ್ಪಿಸಿ, ಸಕಲರ ಅಪ್ಪಣೆಯನ್ನೂ ಪಡೆದು, ಯಾಜಾತಾ....ಹಸಃ ಎಂದು ಮಂಟಪದ ಮೇಲೆ ಅಕ್ಷತೆಗಳನ್ನು ಎರಚಿ, ಇಂದ್ರದಿಕ್ಕಿನಲ್ಲಿ— ತ್ರಾತಾರಂ....ಧಾತ್ವಿಂದ್ರಃ ಎಂದು ಇಂದ್ರನನ್ನು ಆವಾಹಿಸಿ, ಕಪಿಲೆ....ಪ್ರಸೀದಂತುಭವಂತಃ ಎಂದು ಇಂದ್ರಪೂಜಿತ ದಶ

ಶ್ಶೋಶುಚಾನೋ ವಿಶ್ವಾದ್ವೇಷಾಗ್ಂಸಿಪ್ರಮುಮುಗ್ಧ್ಯಸ್ಮತ್) ಅನೇನಾಗ್ನಿಮಾವಾಹ್ಯ, ಅಗ್ನಿವೀರ್ಯಾಯನಮಃ | ಹುತಾಶಿನೇನಮಃ | ಪಿಂಗಳಾಯನಮಃ | ಖಾದಕಾಯನಮಃ | ಹರಾಯನಮಃ | ಜ್ವಲಾಯನಮಃ | ದಹನಾಯನಮಃ | ಬಭ್ರುವೇನಮಃ | ಭಸ್ಮಾಂತಕಾಯನಮಃ | ಕ್ಷಯಾಂತಕಾಯನಮಃ | ಅಗ್ನಿವೀರ್ಯಾಃ ಅಗ್ನಿಪೂಜಿತಾಃ ಹೇದಶರುದ್ರಾಃ ಇತ್ಯಾದಿಪೂಜಾಂತಂಪೂರ್ವವತ್ || ಅಥ ಯಮದಿಶಿ— (ಸುಗಂನಃಪಂಥಾಮಭಯಂಕೃಣೋತು | ಯಸ್ಮಿನ್ನಕ್ಷತ್ರೇಯಮ ಏತಿರಾಜಾ | ಯಸ್ಮಿನ್ನೇನಮಭ್ಯಷಿಂಚಂತದೇವಾಃ ತದಸ್ಯಚಿತ್ರಗ್ಂಹವಿಷಾಯಜಾಮ) ಇತಿ ಯಮಂ, ತತ್ರ ವಿಧಾತ್ರೇನಮಃ | ಕರ್ತ್ರೇನಮಃ | ಧಾತ್ರೇನಮಃ | ಶ್ರೀಕಾಮಾಯನಮಃ | ಸರ್ವನಿಯೋಕ್ತ್ರೇನಮಃ | ಯಾಮ್ಯೇಶಾಯನಮಃ | ರಮೇಶಾಯನಮಃ | ಸಂಯೋಕ್ತ್ರೇನಮಃ | ಹರಾಯನಮಃ | ಯಮವೀರ್ಯಾಃ ಯಮಪೂಜಿತಾಃ ಹೇದಶರುದ್ರಾಃ| ಇತ್ಯಾದಿಪೂಜಾಂತಂ ಪೂರ್ವವತ್ || ಅಥ ನೈಋತ್ಯಾಂದಿಶಿ— (ಅಸುನ್ವಂತಮಯಜಮಾನಮಿಚ್ಛಸ್ತೇನಸ್ಯೇತ್ಯಾಮನ್ವಿಹಿ ತಸ್ಕರಸ್ಯ | ಅನ್ಯಮಸ್ಮದಿಚ್ಛಸಾತ ಇತ್ಯಾನಮೋ ದೇವಿ ನಿಋತೇ ತುಭ್ಯಮಸ್ತು) ಅನೇನ ನಿಋತಿಮಾವಾಹ್ಯ || ತತ್ರ ನೈಋತೇಶಾಯನಮಃ | ವರುಣಾಯನಮಃ | ಹಂತ್ರೇನಮಃ | ಕ್ರೂರದೃಷ್ಟಯೇನಮಃ | ಭಯಾನಕಾಯನಮಃ | ಊರ್ಧ್ವಕೇಶಾಯನಮಃ | ವಿರೂಪಾಕ್ಷಾಯನಮಃ | ಧೂಮ್ರಾಯನಮಃ | ಲೋಹಿತಾಯನಮಃ | ದಂಷ್ಟ್ರಕಾಯನಮಃ | ನೈಋತಿವೀರ್ಯಾಃ ನೈಋತಿಪೂಜಿತಾಃ ಹೇದಶರುದ್ರಾಃ ಇತ್ಯಾದಿಪೂಜಾಂತಂ ಪೂರ್ವವತ್ || ಅಥ ವರುಣದಿಶಿ— (ತತ್ತ್ವಾಯಾಮಿ ಬ್ರಹ್ಮಣಾವಂದಮಾನಸ್ತದಾಶಾಸ್ತೇಯಜಮಾನೋಹವಿರ್ಭಿಃ | ಅಹೇಳಮಾನೋ ವರುಣೇಹಬೋ ಧ್ಯುರುಶಗ್ಂ ಸಮಾನ ಆಯುಃಪ್ರಮೋಷೀಃ) ಅನೇನ ವರುಣಮಾವಾಹ್ಯ || ಬಲಾಯನಮಃ | ಅತಿಬಲಾಯನಮಃ | ಪಾಶಹಸ್ತಾಯನಮಃ| ಮಹಾಬಲಾಯನಮಃ | ಶ್ವೇತಾಯನಮಃ | ಜಯಭದ್ರಾಯನಮಃ | ದೀರ್ಘ

---

ರುದ್ರರನ್ನು ಆವಾಹಿಸಿ ಪೂಜಿಸುವುದು. ಅಗ್ನಿದಿಕ್ಕಿನಲ್ಲಿ—ತ್ವಂನೋ....ಸ್ಮತ್ ಎಂದು ಅಗ್ನಿಯನ್ನು ಆವಾಹಿಸಿ, ಅಗ್ನಿವೀರ್ಯ....ಭವಂತಃ ಎಂದು ಅಗ್ನಿಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ಯಮದಿಕ್ಕಿನಲ್ಲಿ—ಸುಗಂನಃ....ಯಜಾಮ ಎಂದು ಯಮನನ್ನು ಆವಾಹಿಸಿ ವಿಧಾತ್ರೆ....ಭವಂತಃ ಎಂದು ಯಮಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ನೈಋತಿದಿಕ್ಕಿನಲ್ಲಿ— ಅಸುನ್ವಂ....ಮಸ್ತು ಎಂದು ನೈಋತಿಯನ್ನು ಆವಾಹಿಸಿ ನೈಋತೇಶಾ....

ಬಾಹವೇನಮಃ | ಬಲಾಂತಕಾಯನಮಃ | ಬಡಬಾಮುಖಾಯನಮಃ | ಭೈರವಾಯನಮಃ | ವರುಣವೀರ್ಯಾಃ ವರುಣಪೂಜಿತಾಃ ಹೇದಶರುದ್ರಾಃ ಇತ್ಯಾದಿ ಪೂಜಾಂತಂ ಪೂರ್ವವತ್ || ಅಥ ವಾಯವ್ಯದಿಶಿ— (ಆನೋನಿಯುದ್ಭಿಶ್ಶತಿನೀಭಿರಧ್ವರಂ | ಸಹಸ್ರಿಣೀಭಿರುಪಯಾಹಿಯಜ್ಞಂ | ವಾಯೋಅಸ್ಮಿನ್ಸವನೇಮಾದಯಸ್ವ | ಯೂಯಂಪಾತಸ್ವಸ್ತಿಭಿಸ್ಸದಾನಃ) ಇತ್ಯನೇನ ವಾಯುಮಾವಾಹ್ಯ || ಅತ್ರ | ಶೀಘ್ರಾಯನಮಃ | ಲಘವೇನಮಃ | ವಾಯುವೇಗಾಯನಮಃ | ಸೂಕ್ಷ್ಮಾಯನಮಃ | ತೀಕ್ಷ್ಣಾಯನಮಃ | ಭಯಂಕರಾಯನಮಃ | ಪಂಚಾತ್ಮಕಾಯನಮಃ | ಪಂಚಶಿಖಾಯನಮಃ | ಕಪರ್ದಿನೇನಮಃ | ಮೇಘವಾಹನಾಯನಮಃ | ವಾಯುವೀರ್ಯಾಃ ವಾಯುಪೂಜಿತಾಃ ಹೇದಶರುದ್ರಾಃ ಇತ್ಯಾದಿ ಪೂಜಾಂತಂ ಪೂರ್ವವತ್ || ಅಥ ಕುಬೇರದಿಶಿ— (ವಯಗ್ಂಸೋಮವ್ರತೇತವಮನಸ್ತನೂಷುಬಿಭ್ರತಃ ಪ್ರಜಾವಂತೋ ಅಶೀವ.ಹಿ ಇಂದ್ರಾಣೀದೇವಿ ಸುಭಗಾ ಸುಪತ್ನೀ). ಇತ್ಯನೇನ ಕುಬೇರಮಾವಾಹ್ಯ || ತತ್ರ ನಿಧೀಶಾಯನಮಃ | ರೂಪವತೇನಮಃ | ಧನ್ಯಾಯನಮಃ | ಸೌಮ್ಯಾಯನಮಃ | ಶಾಂತಾಯನಮಃ | ಜಟಾಧರಾಯನಮಃ | ಕಾಮಪ್ರಸಾದಾಯನಮಃ | ಲಕ್ಷ್ಮೀಶಾಯನಮಃ | ಪ್ರಕಾಶಾಯನಮಃ | ಇಂದುಯಜ್ಞಾಯನಮಃ | ಕುಬೇರವೀರ್ಯಾಃ ಕುಬೇರಪೂಜಿತಾಃ ಹೇದಶರುದ್ರಾಃ ಇತ್ಯಾದಿ ಪೂಜಾಂತಂ ಪೂರ್ವವತ್ || ಅಥೈಶಾನದಿಶಿ— (ತಮೀಶಾನಂಜಗತಸ್ತಸ್ಥುಷಸ್ಪತಿಂ | ಧಿಯಂಜಿನ್ವಮವಸೇಹೂಮಹೇವಯಂ | ಪೂಷಾನೋಯಥಾವೇದಸಾಮಸದ್ವೃಧೇ | ರಕ್ಷಿತಾಪಾಯುರದಬ್ಧಸ್ಸ್ವಸ್ತಯೇ) ಇತ್ಯನೇನ ಈಶಾನಮಾವಾಹ್ಯ, ತತ್ರ ಈಶಾನಾಯನಮಃ | ವಿದ್ಯೇಶಾಯನಮಃ | ಜ್ಞಾನವತೇನಮಃ | ಮಾತೃಪಿಂಗಳಾಯನಮಃ | ಭೂತಪಾಲಾಯನಮಃ | ಅಜಾಯನಮಃ | ಬಲಯೇನಮಃ | ಮಿತ್ರಾಯನಮಃ |

---

ಭವಂತಃ ಎಂದು ನೈಋತಿಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ವರುಣದಿಕ್ಕಿನಲ್ಲಿ—ತತ್ವಾ...ಪ್ರಮೋಷೀಃ ಎಂದು ವರುಣನನ್ನು ಆವಾಹಿಸಿ, ಬಲಾಯ...ಭವಂತಃ ಎಂದು ವರುಣಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ವಾಯುವ್ಯದಿಕ್ಕಿನಲ್ಲಿ—ಆನೋ... ಸದಾನಃ ಎಂದು ವಾಯುವನ್ನು ಆವಾಹಿಸಿ, ಶೀಘ್ರಾ...ಭವಂತಃ ಎಂದು ವಾಯುಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ಕುಬೇರದಿಕ್ಕಿನಲ್ಲಿ—ವಯಗ್ಂ....ಸುಪತ್ನೀ ಎಂದು ಕುಬೇರನನ್ನು ಆವಾಹಿಸಿ, ನಿಧೀಶಾ...ಭವಂತಃ ಎಂದು ಕುಬೇರಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ಈಶಾನದಿಕ್ಕಿನಲ್ಲಿ—ತಮೀಶಾನಂ....ಸ್ವಸ್ತಯೇ ಎಂದು ಈಶಾನನ

ಸರ್ವವಿದ್ಯಾಧಿಪಾಯನಮಃ | ಸುಖಿಕೃತೇನಮಃ | ಈಶಾನವೀರ್ಯ್ಯಾಃ ಈಶಾನಪೂಜಿತಾಃ ಹೇದಶರುದ್ರಾಃ ಇತ್ಯಾದಿ ಪೂಜಾಂತಂ ಪೂರ್ವವತ್ || ಅಥ ವಾಯವ್ಯ ಪಶ್ಚಿಮಯೋರ್ಮಧ್ಯೇ ಅಧಸ್ತಾತ್ ಅಧೋದಿಶಿ— ಸ್ಯೋನಾಪೃಥಿವಿನೋಭವಾನೃಕ್ಷರಾನಿವೇಶಿನೀ(ಯಚ್ಛಾನಶ್ಶರ್ಮಸಪ್ರಥಾಃ) ಇತ್ಯನೇನ ವಿಷ್ಣುಮಾವಾಹ್ಯ, ತತ್ರ ಬಲಿಪ್ರಿಯಾಯನಮಃ | ವಿಷಧರಾಯನಮಃ | ವೀರೋಗ್ರಸನಾಯನಮಃ | ಪಾಲಕಾಯನಮಃ | ಶುಭಾಯನಮಃ | ಸುವೀರ್ಯ್ಯಾಯನಮಃ | ವೃಷಭಾಯನಮಃ | ಪಾತಾಳೇಶಾಯನಮಃ | ಲೋಹಿತಾಯನಮಃ | ಅನಂತಾಯನಮಃ | ವಿಷ್ಣುವೀರ್ಯ್ಯಾಃ ವಿಷ್ಣುಪೂಜಿತಾಃ ಹೇದಶರುದ್ರಾಃ ಇತ್ಯಾದಿ ಪೂಜಾಂತಂ ಪೂರ್ವವತ್ || ಅಥ ಪೂರ್ವೇಶಾನಯೋರ್ಮಧ್ಯೇ ಊರ್ಧ್ವದಿಶಿ— (ಅಸ್ಮೆರುದ್ರಾಮೇಹನಾ ಪರ್ವತಾಸೋವೃತ್ರಹತ್ಯೇಭರಹೂತೌಸಜೋಷಾಃ | ಯಶ್ಶಂಸತೇಸ್ತುವತೇಧಾಯಿವಜ್ರ ಇಂದ್ರಜ್ಯೇಷ್ಠಾ ಅಸ್ಮಾಗ್ಂ ಅವಂತುದೇವಾಃ) ಇತ್ಯನೇನ ಬ್ರಹ್ಮಣಮಾವಾಹ್ಯ || ಅಧ್ಯಕ್ಷಾಯನಮಃ | ನಭಸೇನಮಃ | ಲಿಪ್ಸವೇನಮಃ | ಶಂಭವೇನಮಃ | ವಿಭವೇನಮಃ | ಗಣಾಧ್ಯಕ್ಷಾಯನಮಃ | ವಿವಾಹಾಯನಮಃ | ಗುಣಸಂವಾಹಾಯನಮಃ | ತ್ರ್ಯಕ್ಷಾಯನಮಃ | ತ್ರಿದಶವಂದಿತಾಯನಮಃ | ಬ್ರಹ್ಮವೀರ್ಯ್ಯಾಃ ಬ್ರಹ್ಮಪೂಜಿತಾಃ ಹೇದಶರುದ್ರಾಃ ಇತ್ಯಾದಿ ಪೂಜಾಂತಂ ಪೂರ್ವವತ್ || ಏವಂ ಶತರುದ್ರಾನ್ ತತ್ತದ್ದಿಕ್ಷ್ವಾವಾಹ್ಯ ಪೂಜಯೇತ್ || (ಕ್ಷೇತ್ರಿಯೈತ್ವಾ ನಿರಋತ್ಯೈತ್ವಾ ದ್ರುಹೋಮುಂಚಾಮಿವರುಣಸ್ಯಪಾಶಾತ್ | ಅನಾಗಸಂಬ್ರಹ್ಮಣೇತ್ವಾಕರೋಮಿಶಿವೇತೇ ದ್ಯಾವಾ ಪೃಥಿವೀಉಭೇಇಮೆ) ಇತಿ ಪಂಚವಿಂಶತಿ ಹಸ್ತಪ್ರಮಾಣದರ್ಭಪಾಶೇನ ಮಂಟಪಮಾವೇಷ್ಟಯೇತ್.

---

ನ್ನು ಆವಾಹಿಸಿ, ಈಶಾನಾ....ಭವಂತಃ ಎಂದು ಈಶಾನಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ಅನಂತರ ವಾಯವ್ಯ ಪಶ್ಚಿಮ ದಿಕ್ಕುಗಳ ಮಧ್ಯದಲ್ಲಿ ಕೆಳಗಡೆ ಸ್ಯೋನಾ.... ಸಪ್ರಥಾಃ ಎಂದು ವಿಷ್ಣುವನ್ನು ಆವಾಹಿಸಿ, ಬಲಿಪ್ರಿಯಾ...ಭವಂತಃ ಎಂದು ವಿಷ್ಣುಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ಈಶಾನ ಪೂರ್ವದಿಕ್ಕುಗಳ ಮಧ್ಯದಲ್ಲಿ ಮೇಲುಗಡೆ ಅಸ್ಮೇ...ದೇವಾಃ ಎಂದು ಬ್ರಹ್ಮನನ್ನು ಆವಾಹಿಸಿ, ಅಧ್ಯಕ್ಷಾ....ಭವಂತಃ ಎಂದು ಬ್ರಹ್ಮಪೂಜಿತ ದಶರುದ್ರರನ್ನು ಆವಾಹಿಸಿ ಪೂಜಿಸುವುದು. ಹೀಗೆ ಮಂಟಪದಲ್ಲಿ ೧೦೦ ರುದ್ರರುಗಳನ್ನು ಆವಾಹಿಸಿ ಪೂಜಿಸಿ, ಕ್ಷೇತ್ರ್ಯೈ....ಇಮೆ ಎಂಬ ಮಂತ್ರದಿಂದ ೨೫ ಮೊಳದುದ್ದದ ದರ್ಭೆಯ ಹಗ್ಗದಿಂದ ಮಂಟಪವನ್ನು ಸುತ್ತುವುದು.

## ಶಿವಲಿಂಗಸಂಸ್ಕಾರಃ.

ಅಥ ಶಿವಲಿಂಗಂ ಸಂಸ್ಕುರ್ಯಾತ್:-ಮಂಟಪಸ್ಯೋತ್ತರಭಾಗೇ ಭೂಮಿಂ ಗೋಮಯೇನೋಪಲಿಪ್ಯ, ಗೋಮೂತ್ರ ಗೋಮಯ ಗೋಕ್ಷೀರ ಗೋದಧಿ ಗೋಘೃತೈಸ್ತತ್ತನ್ಮಂತ್ರೇಣ ಮಾರ್ಜಯಿತ್ವಾ, (ರೋಚನೋರೋಚಮಾನಃ ಶೋಭನೋಶೋಭಮಾನಃ ಕಲ್ಯಾಣ) ಇತಿ ಗೋರೋಚನಯಾ ಸಂಮಾರ್ಜಯೇತ್| ಷಡ್ಭಿರ್ಮಂತ್ರೈಃಷಡ್ಗವ್ಯೈಸ್ಸಕೃದೇವ ಸಂಮಾರ್ಜನಂ || ಮಂಡಲಂ ವಿಧಾಯ, ರಂಗವಲ್ಲ್ಯಾದಿಭಿರಲಂಕೃತ್ಯ, ತಾಮ್ರಪಾತ್ರಾದ್ಯನ್ಯತಮಪಾತ್ರಂ ತತ್ರ ನಿಕ್ಷಿಪ್ಯ, ಶ್ರೀಶೈಲಜಶಿಲಾಮಯಂ ಪಂಚಸೂತ್ರಘಟಿತಂ ಶಿವಲಿಂಗ ಮಾದಾಯ, ವೇದಮಂತ್ರೈಃ ಪ್ರಕ್ಷಾಳ್ಯ, ವಾರುಣೇಭಾಗೇ ಪಾತ್ರೇ ನಿಕ್ಷಿಪ್ಯ, ಪೂಜಾದ್ರವ್ಯಾಣಿ ಸಂಪಾದ್ಯ, ಯಜಮಾನಃ ಪ್ರಾಣಾನಾಯಮ್ಯ, ಏವಂಗುಣೇತ್ಯಾದಿ ........ಶುಭತಿಥೌ ''ಕರ್ಷಣಾದಿ ದೋಷಶಾಂತ್ಯರ್ಥಂ, ''ಹಿರಣ್ಯಶೃಂಗಂಪವಮಾನಸ್ಸುವರ್ಜನಃ'' 'ಸಮಸ್ತೆರುದ್ರಮನ್ಯವ' ಇತ್ಯನುವಾಕೈ ಶ್ಶಿವಲಿಂಗಂ ಸ್ನಾಪಯಿಷ್ಯೇ'' ಇತಿಸಂಕಲ್ಪ್ಯ. ಅಭಿಷಿಂಚೇತ್.

ಅನುವಾಕಕ್ರಮಮಾಹ:— (ಹಿರಣ್ಯಶೃಂಗಂ ವರುಣಂಪ್ರಪದ್ಯೇ ತೀರ್ಥಂ ಮೇದೇಹಿ ಯಾಚತಃ | ಯನ್ಮಯಾಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ | ತನ್ನ ಇಂದ್ರೋವರುಣೊ ರಾಜಾ ಪಾಣಿನಾಹ್ಯವಮರ್ಶತ್ | ಯನ್ಮೇ ಮನಸಾ ವಾಚಾ ಕರ್ಮಣಾವಾ. ದುಷ್ಕೃತಂ ಕೃತಂ ತನ್ನ ಇಂದ್ರೋ ವರು

---

## ಶಿವಲಿಂಗಸಂಸ್ಕಾರವು.

ಮಂಟಪದ ಉತ್ತರ ಭಾಗದಲ್ಲಿ ಮೊದಲು ತೊಪ್ಪೆಯಿಂದ ಸಾರಿಸಿ, ಅದರಮೇಲೆ ಗೋಮೂತ್ರದಿಂದ 'ತತ್ಸವಿತುರ್ವರೇಣ್ಯಂ' ಎಂಬ ಗಾಯತ್ರೀ ಮಂತ್ರದಿಂದಲೂ, ಗೋಮಯದಿಂದ 'ಗಂಧದ್ವಾರಾಂ' ಎಂಬ ಮಂತ್ರದಿಂದಲೂ ಗೋವಿನ ಹಾಲಿನಿಂದ 'ಆಪ್ಯಾಯಸ್ವ' ಎಂಬ ಮಂತ್ರದಿಂದಲೂ, ಗೋವಿನ ಮೊಸರಿನಿಂದ 'ದಧಿಕ್ರಾವ್ಣೋ' ಎಂಬ ಮಂತ್ರದಿಂದಲೂ, ಹಸುವಿನ ತುಪ್ಪದಿಂದ 'ಶುಕ್ರಮಸಿ' ಎಂಬ ಮಂತ್ರದಿಂದಲೂ, ಗೋರೋಜನದಿಂದ 'ರೋಚನೋರೋಚಮಾನಃ' ಎಂಬ ಮಂತ್ರದಿಂದಲೂ ಒಂದೇ ಆವೃತ್ತಿ ಮಂಡಲಾಕಾರವಾಗಿ ಸಾರಿಸಿ, ರಂಗವಲ್ಲಿಯನ್ನು ಬಿಟ್ಟು, ತಾಮ್ರ ಪಾತ್ರವೇ ಮುಂತಾದ ಯಾವುದಾದರೊಂದು ಲೋಹದ ಪಾತ್ರೆಯನ್ನು ಅಲ್ಲಿಟ್ಟು, ಶ್ರೀಶೈಲ ಶಿಲಾಮಯವಾದ ಪಂಚಸೂತ್ರಘಟಿತವಾದ ಶಿವಲಿಂಗವನ್ನು ತೆಗೆದುಕೊಂಡು, ಅದನ್ನು ವೇದ ಮಂತ್ರ ಪಠನಪೂರ್ವಕವಾಗಿ ತೊಳೆದು, ಹಿಂದೆ ಹೇಳಿದ ಪಾತ್ರೆಯಲ್ಲಿ ಪಶ್ಚಿಮದಿಕ್ಕಿನಲ್ಲಿಟ್ಟು, ಪೂಜಾ ಸಾಮಗ್ರಿಯನ್ನೆಲ್ಲಾ ಸಿದ್ಧಪಡಿಸಿಕೊಂಡು.

ಣೋ ಬೃಹಸ್ಪತಿಸ್ಸವಿತಾಚ ಪುನಂತು ಪುನಃಪುನಃ | ನಮೋಗ್ನಯೇಽಪ್ಸುಮತೇ ನಮ ಇಂದ್ರಾಯ ನಮೋ ವರುಣಾಯ ನಮೋ ವಾರುಣ್ಯೈ ನಮೋಽದ್ಭ್ಯಃ| ಯದಪಾಂ ಕ್ರೂರಂ ಯದಮೇಧ್ಯಂ ಯದಶಾಂತಂ ತದಪಗಚ್ಛತಾತ್ | ಅತ್ಯಾಶನಾ ದತೀಪಾನಾದ್ಯಚ್ಚ ಉಗ್ರಾತ್ಪ್ರತಿಗ್ರಹಾತ್ || ತನ್ಮೇ ವರುಣೋ ರಾಜಾ ಪಾಣಿನಾಹ್ಯವಮರ್ಶತ್ | ಸೋಽಹಮಪಾಪೋ ವಿರಜೋ ನಿರ್ಮುಕ್ತೋ ಮುಕ್ತಕಿಲ್ಬಿಷಃ || ನಾಕಸ್ಯ ಪೃಷ್ಠಮಾರುಹ್ಯ ಗಚ್ಛೇದ್ಬ್ರಹ್ಮ ಸಲೋಕತಾಂ | ಯಶ್ಚಾಪ್ಸು ವರುಣಸ್ಸಪುನಾತ್ವಘಮರ್ಷಣಃ | ಪವಮಾನಸ್ಸುವರ್ಜನಃ ಪವಿತ್ರೇಣವಿಚರ್ಷಣೀಃ || ಯಃಪೋತಾ ಸಪುನಾತು ಮಾಪುನಂತುಮಾ ದೇವಜನಾಃ ಪುನಂತು ಮನವೋ ಧಿಯಾ ಪುನಂತು ವಿಶ್ವಆಯವಃ | ಜಾತವೇದಃ ಪವಿತ್ರವತ್| ಪವಿತ್ರೇಣ ಪುನಾಹಿಮಾ | ಶುಕ್ರೇಣ ದೇವದೀದ್ಯತ್ | ಅಗ್ನೇಕ್ರತ್ವಾ ಕ್ರತೂಗ್‌ಂರನು | ಯತ್ತೇಪವಿತ್ರಮರ್ಚಿಷಿ | ಅಗ್ನೇವಿತತಮಂತರಾ | ಬ್ರಹ್ಮತೇನ ಪುನೀಮಹಿ | ಉಭಾಭ್ಯಾಂ ದೇವಸವಿತಃ | ಪವಿತ್ರೇಣ ಸವೇನಚ | ಇದಂ ಬ್ರಹ್ಮಪುನೀಮಹಿ | ವೈಶ್ವದೇವೀಪುನತೀದೇವ್ಯಾಗಾತ್ | ಯಸ್ಯೈಬಹ್ವ್ಯಸ್ತನವೋ ವೀತಪೃಷ್ಠಾಃ | ತಯಾಮದಂತಸ್ಸಧಮಾದ್ಯೇಷು | ವಯಗ್‌ಂ ಸ್ಯಾಮ ಪತಯೋರಯೀಣಾಂ | ವೈಶ್ವಾನರೋರಶ್ಮಿಭಿರ್ಮಾಪುನಾತು | ವಾತಃಪ್ರಾಣೇನೇಷಿರೋಮಯೋಭೂಃ | ದ್ಯಾವಾಪೃಥಿವೀ ಪಯಸಾ ಪಯೋಭಿಃ | ಋತಾವರೀಯಜ್ಞೀಯೆಮಾಪುನೀತಾಂ | ಬೃಹದ್ಭಿಸ್ಸವಿತಸ್ತೃಭಿಃ | ವರ್ಷಿಷ್ಠೈರ್ದೇವಮನ್ಮಭಿಃ | ಅಗ್ನೇದಕ್ಷೈಃ ಪುನಾಹಿಮಾ | ಯೇನದೇವಾಅಪುನತ | ಯೇನಾಪೋದಿವ್ಯಂಕಶಃ | ತೇನದಿವ್ಯೇನಬ್ರಹ್ಮಣಾ | ಇದಂಬ್ರಹ್ಮಪುನೀಮಹಿ | ಯಃ ಪಾವಮಾನೀರಧ್ಯೇತಿ | ಋಷಿಭಿಸ್ಸಂಭೃತಗ್‌ಂರಸಃ | ಸರ್ವಗ್‌ಂಸಪೂತಮಶ್ನಾತಿ | ಸ್ವದಿತಂಮಾತರಿಶ್ವನಾ | ಪಾವಮಾನೀರ್ಯೋಅಧ್ಯೇತಿ | ಋಷಿಭಿಸ್ಸಂಭೃತಗ್‌ಂರಸಃ | ತಸ್ಮೈ ಸರಸ್ವತೀದುಹೆ | ಕ್ಷೀರಗ್‌ಂಸರ್ಪಿರ್ಮಧೂದಕಂ | ಪಾವಮಾನೀಸ್ಸ್ವಸ್ತ್ಯಯನೀಃ | ಸುದಘಾಹಿಪಯಸ್ವತೀಃ | ಋಷಿಭಿಸ್ಸಂಭೃತಗ್‌ಂರಸಃ | ಬ್ರಾಹ್ಮಣೇಷ್ವಮೃತಗ್‌ಂಹಿತಂ | ಪಾವಮಾನೀರ್ದಿಶಂತುನಃ | ಇಮಂ

---

ಯಜಮಾನನು ಪ್ರಾಣಾಯಾಮವಂ ಮಾಡಿ, ದೇಶಕಾಲಗಳನ್ನು ಹೇಳಿ, ಲಿಂಗವನ್ನು ಉಜ್ಜರುವದೇ ಮುಂತಾದುದರಿಂದುಂಟಾಗಿರುವ ದೋಷದ ಶಾಂತಿಗಾಗಿ, 'ಹಿರಣ್ಯಶೃಂಗಂ' ಎಂಬನುವಾಕದಿಂದಲೂ, 'ನಮಸ್ತೆರುದ್ರಮನ್ಯವ' ಎಂಬ ಅನುವಾಕದಿಂದಲೂ, ಶಿವಲಿಂಗವನ್ನು ಅಭಿಷೇಚಿಸುತ್ತೇನೆಂದು ಸಂಕಲ್ಪಿಸಿ, ಹಿರಣ್ಯಶೃಂಗಂ.... ಪುನಾತು; ನಮಸ್ತೆ.... ಅಸ್ಮನ್ನಿಧೇಹಿತಂ

ಲೋಕಮಥೋಅಮುಂ | ಕಾಮಾಂತ್ಸಮರ್ಧಯಂತುನಃ | ದೇವೀರ್ದೇವೈಸ್ಸ
ಮಾಭೃತಾಃ | ಪಾವಮಾನೀಸ್ಸ್ವಸ್ತ್ಯಯನೀಃ | ಸುದುಘಾಹಿಘೃತಶ್ಚ್ಯುತಃ |
ಋಷಿಭಿಸ್ಸಂಭೃತೋರಸಃ | ಬ್ರಾಹ್ಮಣೇಷ್ವಮೃತಗ್ಂಹಿತಂ | ಯೇನದೇವಾ
ಪುನತ | ಆತ್ಮಾನಂಪುನತೇಸದಾ | ತೇನಸಹಸ್ರಧಾರೇಣ | ಪಾವಮಾನ್ಯಃ ಪು
ನಂತುಮಾ | ಪ್ರಾಜಾಪತ್ಯಂಪವಿತ್ರಂ | ಶತೋದ್ಯಾಮಗ್ಂಹಿರಣ್ಮಯಂ | ತೇನ
ಬ್ರಹ್ಮವಿದೋವಯಂ | ಪೂತಂಬ್ರಹ್ಮಪುನೀಮಹಿ | ಇಂದ್ರಸ್ಸುನೀತೀಸಹಮಾಪು
ನಾತು | ಸೋಮಸ್ಸ್ವಸ್ತ್ಯಾವರುಣಸ್ಸಮೀಚ್ಯಾ | ಯಮೋರಾಜಾಪ್ರಮೃ
ಣಾಭಿಃ| ಪುನಾತುಮಾಜಾತವೇದಾಮೂರ್ಜಯಂತ್ಯಾಪುನಾತು) (ನಮಸ್ತೇರು
ದ್ರಮನ್ಯವ........ಅಸ್ಮನ್ನಿಧೇಹಿತಂ) ಇತ್ಯನುವಾಕೈಃ ಶಿವಲಿಂಗಂ ಸಂಸ್ನಾಪ್ಯ
ಪಂಚೋಪಚಾರೈಃಪೂಜಯೇತ್. ಪುನಃ ಪ್ರಾಣಾನಾಯಮ್ಯ, ದೇಶಕಾಲಾವ
ನುಕೀರ್ತ್ಯ.

## ಜಲಾಧಿವಾಸಃ.

ಪುನಃ "ಕರ್ಷಣಾದಿಪಾಪಶಾಂತ್ಯರ್ಥಂ ಜಲಾಧಿವಾಸಂ ಕಾರಯಿಷ್ಯೇ"
ಇತಿ ಸಂಕಲ್ಪ್ಯ, ಗಂಗಾದಿತೀರ್ಥಾಂಬು ಪಂಚಗವ್ಯಭಸಿತಮಿಶ್ರೋದಕೈಃ ಪೂ
ತಪಾತ್ರೇ ಲಿಂಗಸ್ಥಲಂ ಸಕೂರ್ಚಾಭ್ಯಾಂ ವಸ್ತ್ರಾಭ್ಯಾಂ ಸಮಾವೇಷ್ಟ್ಯ ನಿಕ್ಷಿ
ಪ್ಯ, ಅಭಿಮರ್ಶನಪೂರ್ವಕಂ ಅಷ್ಟೋತ್ತರಶತ ಷಡಕ್ಷರಮಂತ್ರೇಣಾಭಿಮಂತ್ರ್ಯ,
ತತ್ತತ್ಕಾಲೋಚಿತಂ ಜಲಾಧಿವಾಸಂ ಕಾರಯಿತ್ವಾ | ತತಸ್ತಲ್ಲಿಂಗಂ ಜಲಾದು

---

ಎಂಬ ಈ ಅನುವಾಕಗಳಿಂದ ಅಭಿಷೇಕವನ್ನು ಮಾಡಿ, ಗಂಧ ಪುಷ್ಪ ಧೂಪ ದೀಪ ನೈವೇದ್ಯ
ವೆಂಬ ಪಂಚೋಪಚಾರಗಳಿಂದ ಪೂಜಿಸಿ, ಪುನಃ ಪ್ರಾಣಾಯಾಮ ಮಾಡಿ, ದೇಶಕಾಲಗಳನ್ನು
ಹೇಳಿ, ಕರ್ಷಣಾದಿ ದೋಷ ಶಾಂತ್ಯರ್ಥವಾಗಿ ಜಲಾಧಿವಾಸವಂ ಮಾಡಿಸುತ್ತೇನೆಂದು ಸಂಕ
ಲ್ಪಿಸಿ, ಗಂಗಾದಿ ತೀರ್ಥಜಲವನ್ನೂ, ಪಂಚಗವ್ಯವನ್ನೂ, ಭಸ್ಮವನ್ನೂ ಮಿಶ್ರಮಾಡಿ ತುಂಬಿರು
ವುತೊಂದು ಪಾತ್ರೆಯಲ್ಲಿ ಪೂರ್ವೋಕ್ತವಾದ ಲಿಂಗಸ್ಥಲವನ್ನು ಎರಡು ದರ್ಭೆಗಳಿಂದ ಸಮೇತ
ವಾದ ಎರಡು ವಸ್ತ್ರಗಳಿಂದ ಸುತ್ತಿ ಇಟ್ಟು, ಅದನ್ನು ಎಡಗಯ್ಯಿಂದ ಸೋಂಕಿರುತ್ತ ೧೦೮
ವೇಳೆ ಷಡಕ್ಷರ ಮಂತ್ರವಂ ಜಪಿಸಿ, ಕಾಲಾವಕಾಶವನ್ನರಿತು, ಜಲಾಧಿವಾಸವಂ ಮಾಡಿಸಿ,
ಅನಂತರ ಲಿಂಗಸ್ಥಲವನ್ನು ನೀರಿನಿಂದ ಮೇಲಕ್ಕೆ ತೆಗೆದು, ಬೇರೊಂದು ಸಾರಿಸಿರುವ ಪ್ರದೇಶ
ದಲ್ಲಿ ಮತ್ತೊಂದು ಅಭಿಷೇಕ ಯೋಗ್ಯವಾದ ಪಾತ್ರೆಯನ್ನಿಟ್ಟು, ಅದರಲ್ಲಿ ಈ ಲಿಂಗಸ್ಥಲ
ನ್ನಿರಿಸಿ, ಮೇಲೆ ಸುತ್ತಿರುವ ವಸ್ತ್ರವನ್ನು ಬಿಚ್ಚಿ, ಪಂಚಗವ್ಯದಿಂದಲೂ, ಭಸ್ಮಮಿಶ್ರಿತವಾದ ಜಲ
ದಿಂದಲೂ, ಗಂಧಮಿಶ್ರಿತವಾದ ಜಲದಿಂದಲೂ ಅಭಿಷೇಕ ಮಾಡಿ, ಪೂರ್ವದಂತೆ ಗಂಧಾದಿಯಾದ

ದ್ಧೃತ್ಯ; ಅಸ್ಯಮಂಡಲೇ ತಲ್ಲಿಂಗಸ್ಥಲಂ ಸ್ನಪನಪಾತ್ರೇ ನಿಕ್ಷಿಪ್ಯ| ವೇಷ್ಟಿತವಸ್ತ್ರಂ ವ್ಯಪೋಹ್ಯ | ಪಂಚಗವ್ಯೈರ್ಭಸ್ಮೋದಕೈ ರ್ಗಂಧತೋಯೈಸ್ಸಂಸ್ನಾಪ್ಯ | ಗಂಧಾದಿಭಿರಭ್ಯರ್ಚಯೇತ್.

ಧಾನ್ಯಾಧಿವಾಸಃ

ಮಂಡಲಸ್ಯ ಈಶಾನದಿಶಿ ಷಟ್ಸಮ್ಮಾರ್ಜನೇನ ಭೂಶುದ್ಧಿಂ ಕೃತ್ವಾ| ರಂಗವಲ್ಲ್ಯಾದಿನಾಽಷ್ಟದಳಪದ್ಮಂ ವಿಲಿಖ್ಯ, ಸಪ್ತಹಸ್ತಪ್ರಮಾಣಂ ವಸ್ತ್ರಮಾಚ್ಛಾದ್ಯ, ತದುಪರಿ ಅಂಗುಲ ಪ್ರಮಾಣಂ ಶ್ಯಾಮಾಕೈಃ ಸ್ಥಂಡಿಲಂಕೃತ್ವಾ, ಅಷ್ಟದಳಪದ್ಮಂ ರಚಯಿತ್ವಾ, ವಸ್ತ್ರಮಾಚ್ಛಾದ್ಯ, ತದುಪರಿ ಗೋಧೂಮೈಸ್ಸ್ಥಂಡಿಲಂ ಕೃತ್ವಾ, ಅಷ್ಟದಳಕಮಲಂ ಲಿಖಿತ್ವಾ, ತದುಪರಿ ವಸ್ತ್ರಮಾಚ್ಛಾದ್ಯ | ತದುಪರಿ ವ್ರೀಹಿಭಿಸ್ಸ್ಥಂಡಿಲಂ ಕೃತ್ವಾ| ಅಷ್ಟದಳಪದ್ಮಂ ಲಿಖಿತ್ವಾ| ತದುಪರಿ ವಸ್ತ್ರಮಾಚ್ಛಾದ್ಯ| ತದುಪರಿ ತಂಡುಲೈಃ ಸ್ಥಂಡಿಲಂ ಕೃತ್ವಾ, ಅಷ್ಟದಳಪದ್ಮಂ ವಿಲಿಖ್ಯ | ತದುಪರಿ ವಸ್ತ್ರಮಾಚ್ಛಾದ್ಯ | ತದುಪರಿ ಚೂತಬಿಲ್ವಾಮಲಕಕುಶಾಪಾಮಾರ್ಗಪತ್ರಾಣಿ ನಿಕ್ಷಿಪ್ಯ, ತದುಪರಿ ವಸ್ತ್ರಮಾಚ್ಛಾದ್ಯ || ಪ್ರಾಣಾನಾಯಮ್ಯ | ದೇಶಕಾಲಾವನುಕೀರ್ತ್ಯ, ಅಸ್ಯಾಂ ಶುಭತಿಥೌ ಶಾಂತ್ಯರ್ಥಂ ಶಯನಾರ್ಥಂ ಧಾನ್ಯಾಧಿವಾಸಂ ಕಾರಯಿಷ್ಯೇ || ಇತಿ ಸಂಕಲ್ಪ್ಯ, ತಲ್ಲಿಂಗಸ್ಥಲಂ ಸಕೂರ್ಚೇನ ವಸ್ತ್ರಯುಗ್ಮೇನ ಸಂವೇಷ್ಟ್ಯ, ತತ್ಪುರುಷಮಂತ್ರೇಣ ಪ್ರಾಕ್ಶಿರಸ್ಕಮಧಸ್ಸೂತ್ರಂ ನಿಕ್ಷಿಪ್ಯ || ವಾ

---

ಪಂಚೋಪಚಾರದಿಂದರ್ಚಿಸಿ, ಪುನಃ ಮಂಡಲದ ಈಶಾನಭಾಗದಲ್ಲಿ ಗೋಮೂತ್ರಾದಿಗಳಿಂದ ಆಯಾ ಮಂತ್ರಗಳಿಂದ ಷಟ್ಸಮ್ಮಾರ್ಜನೆಯಂ ಮಾಡಿ, ಅಲ್ಲಿ ರಂಗವಲ್ಲಿಯಿಂದ ಅಷ್ಟದಳಪದ್ಮಮಂ ಬರೆದು ಏಳು ಮೊಳದ ಉದ್ದವುಳ್ಳ ಒಂದು ಹೊಸಪಂಚೆಯ ತುದಿಯನ್ನು ಅದರಮೇಲೆ ಹಾಸಿ, ಅದರ ಮೇಲೆ ಸಾಮೆಯನ್ನು ಹರಡಿ, ಒಂದಂಗುಲ ಪ್ರಮಾಣದ ಎತ್ತರದ ಜಗತಿಯಂ ಮಾಡಿ, ಅಷ್ಟದಳ ಕಮಲವನ್ನು ಬರೆದು, ಅದೇ ವಸ್ತ್ರವನ್ನೇ ಸ್ವಲ್ಪ ಅದರಮೇಲೆ ಹಾಸಿ, ಪುನಃ ಬಟ್ಟೆಯ ಮೇಲೆ ಎಳ್ಳನ್ನು ಪೂರ್ವದಂತೆ ಹರಡಿ, ಜಗತಿಯನ್ನು ಮಾಡಿ, ಅಷ್ಟದಳ ಕಮಲವಂ ಬರೆದು, ಇನ್ನು ಸ್ವಲ್ಪ ಅದೇ ಬಟ್ಟೆಯನ್ನೇ ಅದರ ಮೇಲೆ ಹಾಸಿ, ಹೀಗೆಯೇ ಅದರ ಮೇಲೆ ಗೋಧಿಯನ್ನೂ, ಬತ್ತವನ್ನೂ, ಅನಂತರ ಅಕ್ಕಿಯನ್ನೂ, ಕಡೆಗೆ ಮಾವಿನ ಚಿಗುರು, ಬಿಲ್ವಪತ್ರೆ, ಪಲ್ಲೀಸೊಪ್ಪು, ದರ್ಭೆ, ಉತ್ತರೇಣಿಸೊಪ್ಪು ಇವುಗಳನ್ನು ಹರಡಿ, ಅದರ ಮೇಲೆ ಅದೇ ಬಟ್ಟೆಯನ್ನೇ ಹೊದ್ದಿಸಿ, ಯಜಮಾನನು ಪ್ರಾಣಾಯಾಮವಂ ಮಾಡಿ, ದೇಶಕಾಲಗಳನ್ನು ಹೇಳಿ, ಶಾಂತಿಗಾಗಿಯೂ ಶಯನಮಾಡಿಸುವುದಕ್ಕೋಸ್ಕರವೂ ಲಿಂಗಸ್ಥಲಕ್ಕೆ ಧಾನ್ಯಾಧಿವಾಸವಂ ಮಾಡಿಸುತ್ತೇನೆಂದು ಸಂಕಲ್ಪಿಸಿ, ಆ ಲಿಂಗಸ್ಥಲವನ್ನು ಎರಡು ದರ್ಭೆಗಳ ಸಮೇತ ಎರಡು ವಸ್ತ್ರಗಳಿಂದ ಸುತ್ತಿ, ಪೂರ್ವದಿಕ್ಕಿಗೆ ಲಿಂಗತಿರಸ್ಸಿರುವಂತೆಯೂ, ಗೋಮುಖವು ಅಧೋಮುಖವಾಗಿರುವಂತೆ

ಮವಾಣಿನಾ ಸ್ಪೃಶೇತ್, ಸೀತ್ಕಾರಪ್ರಾಣಾಯಾಮೇನ ಸಹಸ್ರಮೂಲಮಂತ್ರೇಣಾಭಿಮಂತ್ರ್ಯ, ಧಾನ್ಯಾಧಿವಾಸಂ ಕಾರಯಿತ್ವಾ, ಅನಂತರಂ ಶಯನಾಲ್ಲಿಂಗಮುದ್ಧೃತ್ಯ, ಲಿಂಗಸ್ಥಲಮಾದಾಯ, ಭಸ್ಮತೋಯೈರ್ಗಂಧೋದಕೈಸ್ಸದ್ಯೋಜಾತಮಂತ್ರೇಣ ಸಂಸ್ನಾಪ್ಯ, ಪಂಚೋಪಚಾರೈರಭ್ಯರ್ಚಯೇತ್.

ಷಡಧ್ವಶೋಧನಂ.

ಅನ್ಯಮಂಡಲೇ ತಂಡುಲಸ್ಥಂಡಿಲೋಪರಿ ಪಾತ್ರೇ ಲಿಂಗಸ್ಥಲಂ ನಿಕ್ಷಿಪ್ಯ, ಪ್ರಾಣಾನಾಯಮ್ಯ ॥ ಏವಂಗುಣೇತ್ಯಾದಿ ಶುಭತಿಥೌ ಷಡಧ್ವಶೋಧನದ್ವಾರಾ ಶಿವಕಳಾವಾಹನಾರ್ಥಂ ಷಡಧ್ವಶುದ್ಧಿಂ ಕರೋಮೀತಿಸಂಕಲ್ಪ್ಯ; ತತ್ರ ಅಧಃ ಪಟ್ಟಿಕಾಂ ದಕ್ಷಿಣಹಸ್ತೇನ ಕೂರ್ಚೇನ ಸಂಸ್ಪೃಶೇತ್ ॥

ಭುವನಾಧ್ವನ್ಯಾಸಃ:—

ಓಂ ಹಾಂ ಅನಾಶ್ರಿತಭುವನಾಯನಮಃ | ಓಂ ಹಾಂ ಅನಾಥಭುವನಾಯನಮಃ | ವ್ಯೋಮರೂಪಿಣೇನಮಃ | ಊರ್ಧ್ವಗಾಮಿನೇನಮಃ | ಮೋಚಕಾಯೈ | ರೋಚಿಕಾಯೈ | ದೀಪಿಕಾಯೈ | ಇಂಧಿಕಾಯೈ | ಶಾಂತ್ಯತೀತಾಯೈ | ಶಾಂತ್ಯೈ | ವಿದ್ಯಾಯೈ | ಪ್ರತಿಷ್ಠಾಯೈ | ನಿವೃತ್ತ್ಯೈ | ಶಿಖಂಡಿನೇ | ಶ್ರೀಕಂಠಾಯ | ತ್ರಿಮೂರ್ತಯೆ | ಏಕರುದ್ರಾಯ | ಏಕನೇತ್ರಾಯ | ಶಿವೋತ್ತಮಾಯ | ಸೂಕ್ಷ್ಮಭವೆ | ಅನುತ್ತಮಾಯ | ವಿದ್ಯಾಧಿಪಾಯ | ಜ್ವಲಾಯ |

---

ಯೂ, ತತ್ಪುರುಷ ಮಂತ್ರದಿಂದ ಪೂರ್ವೋಕ್ತವಾದ ಧಾನ್ಯದ ಜಗತಿಯ ಮೇಲೆ ಮಲಗಿಸಿ, ಅದನ್ನು ಎಡಗೈಯಿಂದ ಸ್ಪರ್ಶಿಸಿಕೊಂಡು, ಪೂರಕ ಕುಂಭಕ ರೇಚಕರೂಪವಾಗಿ ಅಭ್ಯಸ್ತಮಾದ ಸೀತ್ಕಾರ ಪ್ರಾಣಾಯಾಮವಂ ಮಾಡಿ, ಸಹಸ್ರವೇಳೆ ಮೂಲಮಂತ್ರದಿಂದಭಿಮಂತ್ರಿಸಿ, ಅನಂತರ ಆ ಶಯನಸ್ಥಲದಿಂದ ಲಿಂಗವನ್ನು ತೆಗೆದುಕೊಂಡು, ಹಸ್ತದಲ್ಲಿಟ್ಟು, ಭಸ್ಮಮಿಶ್ರಿತ ಜಲದಿಂದಲೂ, ಗಂಧಮಿಶ್ರಿತ ಜಲದಿಂದಲೂಸಹ ಸದ್ಯೋಜಾತ ಮಂತ್ರದಿಂದ ಅಭಿಷೇಕಮಾಡಿ. ಪೂರ್ವದಂತೆ ಪಂಚೋಪಚಾರ ಪೂಜೆಯಂ ಮಾಡುವುದು.

ಷಡಧ್ವಶೋಧನವು.

ಬಳಿಕ ಬೇರೊಂದು ಸಾರಿಸಿದ ಮಂಡಲದಲ್ಲಿ ಅಕ್ಕಿಯ ಗುಡ್ಡೆಯನ್ನು ಹಾಕಿ ಜಗತಿಯನ್ನು ಮಾಡಿ, ಅದರ ಮೇಲೊಂದು ಪಾತ್ರೆಯನ್ನಿಟ್ಟು, ಅದರಲ್ಲಿ ಈ ಲಿಂಗಸ್ಥಲವನ್ನಿರಿಸಿ, ಪ್ರಾಣಾಯಾಮವ ಮಾಡಿ, ಷಡಧ್ವಶೋಧನಪೂರ್ವಕವಾಗಿ ಶಿವಕಳೆಯನ್ನು ಆವಾಹಿಸುವುದಕ್ಕಾಗಿ ಈ ಲಿಂಗಸ್ಥಲದಲ್ಲಿ ಷಡಧ್ವಶುದ್ಧಿಯಂ ಮಾಡುತ್ತೇನೆಂದು ಸಂಕಲ್ಪಿಸಿ, ಬಲಗೈಯಲ್ಲಿ ಹಿಡಿದಿರುವ ದರ್ಭೆಯಿಂದ ಆ ಲಿಂಗಸ್ಥಲದ ಪೀಠದ ಅಧೋಭಾಗದ ಸುತ್ತುಪಟ್ಟಿಗೆ ಸೋಂಕಿಸಿ ಹಿಡಿದು, ಓಂ ಹಾಂ ಅನಾಶ್ರಿತ........ಕಾಲಾಗ್ನಿರುದ್ರಭುವನಾಯನಮಃ ಎಂದು ಹೇಳಿ, (ಇಲ್ಲಿ ಉದ್ದ

ಸಂದಿನೇ | ರೂಪಿಣೇ | ಅಂಬಿಕಾಯೈ | ಸ್ಥಾಣುಮತ್ಯೈ | ಬ್ರಹ್ಮವೇತಾಳ್ಯೈ | ತ್ರಿಗುಣ್ಯೈ | ಮನೋನ್ಮನ್ಯೈ | ಸರ್ವಭೂತದಮನಾಯ | ಬಲಪ್ರಮಥನಾಯ | ಬಲವಿಕರಣಾಯ | ಕಲವಿಕರಣಾಯ | ಕಾಲಾಯ | ರುದ್ರಾಯ | ಜ್ಯೇಷ್ಠಾಯ | ವಾಮಾಯ | ಏಕವೀರಾಯ | ಪಂಚಾಂತಕಾಯ | ಸೂರಗಾಯ | ಪಿಂಗಾಯ | ಜ್ಯೋತಿಷೇ | ಸಂವರ್ತಾಯ | ಚಂಡಾಯ | ಕ್ರೋಧೇಶಾಯ | ಶ್ರೀಕಂಠಾಯ | ಉಮಾಯೈ | ಕುಮಾರಾಯ | ವಿಷ್ಣವೇ | ಭೈರವಾಯ | ಕೃತಾಯ | ಅಕೃತಾಯ | ಬ್ರಹ್ಮಣೇ | ಪ್ರಜೇಶಾಯ | ಸೌಮ್ಯಾಯ | ಇಂದ್ರಾಯ | ಗಂಧರ್ವಾಯ | ಯಕ್ಷಾಯ | ರಾಕ್ಷಸಾಯ | ಪಿಶಾಚಾಯ | ಸ್ಥೂಲೇಶ್ವರಾಯ | ಶಂಕುಕರ್ಣಾಯ | ಕಾಳಾಂಜನಾಯ | ಮಂಡಲೇಶ್ವರಾಯ | ಮಾಕೋಟಯೆ | ದುರಂಡಾಯ | ಡಾಲಗಂಡಾಯ | ಅನುಪಮಗುಣಯುತಾಯ | ವಿದೂರಕಾಯ | ಘೋರಕಾಯ | ಪ್ರಜಾಪ್ರತಯೆ | ಹುತಾಶನಾಯ | ಕಾಲರೂಪಿಣೇ | ವಿಶಾಲಜಟಿಲಾಯ | ರೌದ್ರಾಯ | ಪಿಂಗಳಾಕ್ಷಾಯ | ಕಾಲದಂಷ್ಟ್ರಾಯ | ಅಜೇಶಾಯ | ಸರ್ವವಿದ್ಭವೇ | ಭಾಸುರಾಯ | ಸುಬಾಹವೇ | ಮಂತ್ರರೂಪಿಣೇ | ಸ್ಥಾಣವೇ | ಸ್ವರ್ಣಾಕ್ಷಾಯ | ಭದ್ರಕರ್ಣಾಯ | ಗೋಕರ್ಣಾಯ | ಮಹಾಬಲಾಯ | ಅವಿಮುಕ್ತಾಯ | ರುದ್ರಕೋಟಯೆ | ವಸ್ತ್ರಾಪದಾಯ | ಭೀಮಾಯ | ಮಹೇಂದ್ರಾಯ | ಅಟ್ಟಹಾಸಾಯ | ವಿಮಲಾಯ | ಬಲಾಯ | ನಾಖಂಡಲಾಯ | ಕುರುಕ್ಷೇತ್ರಾಯ | ಗಯಾಯೈ | ಭೈರವಾಯ | ಕೇದಾರಾಯ | ಮಧ್ಯಮಾಯ | ಮಹಾಕಾಳಾಯ | ಮಾತೃಕೇಶ್ವರಾಯ | ಕಲ್ಪಮತೇ | ಶ್ರೀಶೈಲಾಯ | ಹರಿಶ್ಚಂದ್ರಾಯ | ನಾಕುಲಾಯ | ಭಾರಭೂತಯೇ | ಡಿಂಡಯೇ | ಆಷಾಢಯೇ | ಪುಷ್ಕರಾಯ | ನೈಮಿಶಾಯ | ಪ್ರಭಾಸಾಯ | ಅಮರೇಶಾಯ | ತ್ರಿದಶವಂದಿತಾಯ | ತ್ರ್ಯಕ್ಷಾಯ | ಗುಣಸಂವಾಹಾಯ | ವಿವಾಹಾಯ | ವಿಚಕ್ಷಣಾಯ | ವಿಭವೇ | ಶಂಭವೇ | ಲಿಪ್ಸವೇ | ಸಭಸೇ | ಅಧ್ಯಕ್ಷಾಯ | ಅನಂತಾಯ | ಲೋಹಿತಾಯ | ಪಾತಳೇಶಾಯ | ವೃಷಭಾಯ | ಸುವೀರ್ಯಾಯ | ಶುಭಾಯ | ಪಾಲಕಾಯ | ವೀರೋಗ್ರಸನಾಯ | ವಿಷಧರಾಯ | ಬಲಿಪ್ರಿಯಾ

---

ಳ್ಳೂ ಪ್ರತಿಪದದ ಪ್ರಾರಂಭದಲ್ಲೂ ಓಂ ಹಾಂ ಎಂಬ ಪ್ರಣವಗಳನ್ನೂ ಕಡೆಯಲ್ಲಿ ನಮಃ ಎಂದೂ ಸೇರಿಸಿಕೊಂಡು ಪಠಿಸಬೇಕು.) ಭುವನಾಧ್ವನ್ಯಾಸನಂ ಮಾಡುವುದು. ಅನಂತರ ಅ

ಯ | ಸರ್ವಸುಖಕೃತೇ | ಸರ್ವವಿದ್ಯಾಧಿಪಾಯ | ಮಿತ್ರಾಯ | ಬಲಯೆ | ಅಜಾಯ | ಭೂತಪಾಲಾಯ | ಮಾತೃಪಿಂಗಳಾಯ | ಜ್ಞಾನವತೇ | ವಿದ್ಯೇಶಾಯ | ಈಶಾನಾಯ | ಇಂದುಯಜ್ಞಪಾಯ | ಪ್ರಕಾಶಾಯ | ಲಕ್ಷ್ಮೀಶಾಯ | ಕಾಮಪ್ರಸಾದಾಯ | ಜಟಾಧರಾಯ | ಶಾಂತಾಯ | ಸೌಮ್ಯಾಯ | ಧನ್ಯಾಯ | ರೂಪವತೇ | ಸಿಧೀಶಾಯ | ಮೇಘವಾಹನಾಯ | ಕಪರ್ದಿನೆ | ಪಂಚಶಿಖಾಯ | ಪಂಚಾತ್ಮಕಾಯ | ಭಯಂಕರಾಯ | ತೀಕ್ಷ್ಣಾಯ | ಸೂಕ್ಷ್ಮಾಯ | ವಾಯುವೇಗಾಯ | ಲಘವೆ | ಶೀಘ್ರಾಯ | ಭೈರವಾಯ | ಒಡಬಾಮುಖಾಯ | ಬಲಾಂತಕಾಯ | ದೀರ್ಘಬಾಹವೆ | ಜಯಭದ್ರಾಯ | ಶ್ವೇತಾಯ | ಮಹಾಬಲಾಯ | ಪಾಶಹಸ್ತಾಯ | ಅತಿಬಲಾಯ | ದಂಷ್ಟ್ರಕಾಯ | ಲೋಹಿತಾಯ | ಧೂಮ್ರಾಯ | ವಿರೂಪಾಕ್ಷಾಯ | ಊರ್ಧ್ವರೇತಸೆ | ಭಯಾನಕಾಯ | ಕ್ರೂರದೃಷ್ಟಯೇ | ಹಂತ್ರೇ | ವರುಣಾಯ | ನಿಯತೇಶಾಯ | ಯಮಪೂಜಿತಾಯ | ಸಂಯೋಕ್ತ್ರೆ | ರಮೇಶಾಯ | ಯಾಮ್ಯೇಶಾಯ | ಸರ್ವನಿಯೋಕ್ತ್ರೆ | ಶ್ರೀಕಾಮಾಯ | ಕರ್ತ್ರೆ | ಧಾತ್ರೆ | ವಿಧಾತ್ರೆ | ಕ್ಷಯಾಂತಕಾಯ | ಭಸ್ಮಾಂತಕಾಯ | ಬಭ್ರವೆ | ದಹನಾಯ | ಜ್ವಲನಾಯ | ಹರಾಯ | ಖಾದಕಾಯ | ಪಿಂಗಳಾಯ | ಹುತಾಶಿನೆ | ಅಗ್ನಿರುದ್ರಾಯ | ತ್ರಿದಶಾಧಿಪಾಯ | ಪಿನಾಕಿನೆ | ಶಾಸ್ತ್ರೆ | ಅವ್ಯಯಾಯ | ವಿಭೂತಯೇ | ಪ್ರಮರ್ದನಾಯ | ವಜ್ರದೇಹಾಯ | ಬದ್ಧಾಯ | ಕಪಿಲೇಶಾಯ | ರೌದ್ರಾಯ | ವೈಷ್ಣವಾಯ | ಬ್ರಾಹ್ಮಾಯ | ಪಾಟಕಾಯ | ಕೂಷ್ಮಾಂಡಾಯ | ಕಾಲಾಗ್ನಿರುದ್ರ ಭುವನಾಯನಮಃ || ಇತಿ ಭುವನಾಧ್ವನ್ಯಾಸಃ.

ತತ್ಪಂಕಜೇ ಪದಾಧ್ವನ್ಯಾಸಃ:—

ಓಂ ಹಾಂ ಓಂ || ಓಂ ಹಾಂ ವ್ಯೋಮವ್ಯಾಪಿನೇ, ಓಂ ಹಾಂ ಸರ್ವವ್ಯಾಪಿನೇ, ಶಿವಾಯ, ಅನಂತಾಯ, ಅನಾಪ್ಯಾಯ, ಅನಾಶ್ರಿತಾಯ, ಶಿವಾಯ, ಶಾಶ್ವತಾಯ, ಯೋಗಪೀಠಸಂಸ್ಥಿತಾಯ, ನಿತ್ಯಯೋಗಿನೇ, ಧ್ಯಾನಾಧಾರಾಯ, ಓಂ ನಮಶ್ಶಿವಾಯ, ಸರ್ವಪ್ರಭವೇ, ಶಿವಾಯ, ಈಶಾನಶಿರಸೇ, ತತ್ಪುರುಷವಕ್ತ್ರಾಯ, ಅಘೋರಹೃದಯಾಯ, ವಾಮದೇವಗುಹ್ಯಾಯ, ಸದ್ಯೋ

---

ಲಿಂಗಸ್ಥಲದಲ್ಲಿ ಪೀಠದ ಅಧಃಪಟ್ಟಿಕೆಯಮೇಲೆ ಅಧೋಮುಖವಾದ ಕಮಲದ ಆಕಾರದಂತಿರುವ ಭಾಗದಲ್ಲಿ ದರ್ಭೆಯನ್ನು ಸೋಕಿಸಿ, ಓಂ ಹಾಂ ಓಂ. ಓಂ ಹಾಂ, ವ್ಯೋಮವ್ಯಾಪಿನೆ

ಜಾತಮೂರ್ತಯೇ, ಓಂ ನಮೋನಮಃ, ಓಂ ಹಾಂ ಗುಹ್ಯಾತಿಗುಹ್ಯಾಯ, ಗೋಪ್ತ್ರೇ, ನಿಧನಾಯ, ಸರ್ವವಿದ್ಯಾಧಿಪಾಯ, ಜ್ಯೋತೀರೂಪಾಯ, ಪರಮೇಶ್ವರಪದಾಯ, ಅಚೇತನಾಚೇತನಾಯ, ವ್ಯೋಮವ್ಯೋಪಾಯ, ವ್ಯಾಪಿವ್ಯಾಪಿನೆ, ಅರೂಪಿನರೂಪಿನೆ-ಪ್ರಥಮಪ್ರಥಮಾಯ, ತೇಜಸ್ತೇಜಸೇ, ಜ್ಯೋತಿರ್ಜ್ಯೋತಿಷೆ, ಅರೂಪಿನೆ, ಅನಗ್ನಯೆ, ಅಧೂಮಾಯ ಅಭಸ್ಮಾಯ, ಅನಾಧಾಯ, ನಾನಾನಾನಾನಮಃ, ಧೂಧೂಧೂನಮಃ, ಓಂಭೂಃನಮಃ, ಓಂಭುವಃನಮಃ, ಓಂಸುವಃನಮಃ, ಅನಿಧನಾಯ, ನಿಧನೋದ್ಭವಾಯ, ಶಿವಾಯ, ಶರ್ವಾಯ, ಪರಮಾತ್ಮನೇ, ಮಹೇಶ್ವರಾಯ, ಮಹಾತೇಜಸೆ, ಸದ್ಭಾವೇಶ್ವರಾಯ, ಪರಮೇಶ್ವರಾಯ, ಮಹಾದೇವಾಯ, ಯೋಗಾಧಿಪತಯೆ, ಮುಂಚಮುಂಚಾಯ, ಶರ್ವಶರ್ವಾಯ, ಭವಭವಾಯ, ಭವೋದ್ಭವಾಯ, ಸರ್ವಭೂತಾಯ, ಸುಖೋದ್ಭವಾಯ, ಸರ್ವಸಾನ್ನಿಧ್ಯಕರಾಯ, ಬ್ರಹ್ಮವಿಷ್ಣುರುದ್ರಪರಾಯ, ಅನರ್ಚಿತಾನರ್ಚಿತಾಯ, ಅಸಂಸ್ಥಿತಾಸಂಸ್ಥಿತಾಯ, ಅಪೂರ್ವಸ್ಥಿತಾಪೂರ್ವಸ್ಥಿತಾಯ, ಸಾಕ್ಷಿಸಾಕ್ಷಿನೇ, ತರುತರವೇ, ಪತಂಗಪತಂಗಾಯ, ಪಿಂಗಪಿಂಗಾಯ, ಜ್ಞಾನಜ್ಞಾನಾಯ, ಶಬ್ದಶಬ್ದಾಯ, ಸೂಕ್ಷ್ಮಸೂಕ್ಷ್ಮಾಯ, ಶಿವಾಯ, ಸರ್ವದಾಯ, ಓಂ ನಮೋನಮಃ, ಓಂ ಶಿವಾಯ, ಓಂ ನಮೋನಮಃ, ಓಂ ಹಾಂ ಓಂ— ಇತಿ ಪದಾಧ್ವನ್ಯಾಸಃ ||

ಅಥ ತತ್ಕಂಠೆ ವರ್ಣಾಧ್ವನ್ಯಾಸಃ —

ಓಂ ಹಾಂ ಅಂನಮಃ, ಓಂ ಹಾಂ ಆಂನಮಃ, ಓಂ ಹಾಂ ಇಂನಮಃ, ಓಂ ಹಾಂ ಈಂನಮಃ, ಓಂ ಹಾಂ ಉಂನಮಃ, ಓಂ ಹಾಂ ಊಂನಮಃ, ಓಂ ಹಾಂ ಋಂನಮಃ, ಓಂ ಹಾಂ ೠಂನಮಃ, ಌಂನಮಃ, ೡಂನಮಃ, ಏಂನಮಃ, ಐಂನಮಃ, ಓಂ, ಔಂ, ಅಂ, ಅಃ, ಕಂ ಖಂ, ಗಂ, ಘಂ, ಙಂ, ಚಂ, ಛಂ, ಜಂ, ಝಂ, ಞಂ, ಟಂ, ಠಂ, ಡಂ, ಢಂ, ಣಂ, ತಂ, ಥಂ, ದಂ, ಧಂ, ನಂ, ಪಂ, ಫಂ, ಬಂ, ಭಂ, ಮಂ, ಯಂ, ರಂ, ಲಂ, ವಂ, ಶಂ, ಷಂ, ಸಂ ಹಂ, ಳಂ, ಕ್ಷಂನಮಃ || ಇತಿ ವರ್ಣಾಧ್ವನ್ಯಾಸಃ.

---

......ಓಂ ಹಾಂ ನಮೋನಮಃ, ಓಂ ಹಾಂ ಓಂ ಎಂದು ಹೇಳಿ ಪದಾಧ್ವನ್ಯಾಸವಂ ಮಾಡುವುದು. ಅನಂತರ ಆ ಕಮಲದಮೇಲೆ ಪೀಠಮಧ್ಯದಲ್ಲಿ ಕಂಠದಂತಿರುವ ಪ್ರದೇಶದಲ್ಲಿ ದರ್ಭೆಯನ್ನು ಸೋಂಕಿಸಿ ಹಿಡಿದು, ಓಂ ಹಾಂ ಅಂನಮಃ............ಓಂ ಹಾಂ ಕ್ಷಂನಮಃ ಎಂದು ಹೇಳಿ, ವರ್ಣಾಧ್ವನ್ಯಾಸವಂ ಮಾಡುವುದು. ಅನಂತರ ದರ್ಭೆಯನ್ನು ಮಧ್ಯಕಂಠದ ಮೇಲ್ಗಡೆ

ಅಥೋರ್ಧ್ವಪಂಕಜೇ ಕಲಾಧ್ವನ್ಯಾಸಃ:—

ಓಂ ಹಾಂ ಶಾಂತ್ಯತೀತಕಲಾಯೈನಮಃ | ಓಂ ಹಾಂ ಶಾಂತಿಕಲಾಯೈನಮಃ | ವಿದ್ಯಾಕಲಾಯೈನಮಃ, ಪ್ರತಿಷ್ಠಾಕಲಾಯೈನಮಃ, ನಿವೃತ್ತಿಕಲಾಯೈನಮಃ || ಇತಿ ಕಲಾಧ್ವನ್ಯಾಸಃ.

ಅಥೋರ್ಧ್ವಪಟ್ಟಿಕಾಯಾಂ ತತ್ವಾಧ್ವನ್ಯಾಸಃ:—

ಓಂ ಹಾಂ ಶಿವತತ್ವಾಯನಮಃ, ಶಕ್ತಿತತ್ವಾಯ, ಸದಾಶಿವತತ್ವಾಯ, ಈಶ್ವರಾಯ, ಶುದ್ಧವಿದ್ಯಾಯೈ, ಕಲಾಯೈ, ನಿಯತ್ಯೈ, ಕಾಲಾಯ, ವಿದ್ಯಾಯೈ, ರಾಗಾಯ, ಪುರುಷಾಯ, ಪ್ರಕೃತ್ಯೈ, ಗುಣಾಯ, ಬುದ್ಧಯೆ, ಅಹಂಕಾರಾಯ, ಚಿತ್ತಾಯ, ನೇತ್ರಾಯ, ತ್ವಚೆ, ಶ್ರೋತ್ರಾಯ, ಜಿಹ್ವಾಯೈ, ಘ್ರಾಣಾಯ, ವಾಚೇ, ಪಾಣಯೇ, ಪಾದಾಯ, ಪಾಯವೆ, ಉಪಸ್ಥಾಯ, ಶಬ್ದಾಯ, ಸ್ಪರ್ಶಾಯ, ರೂಪಾಯ, ರಸಾಯ, ಗಂಧಾಯ, ಆಕಾಶಾಯ, ವಾಯವೇ, ಅಗ್ನಯೆ, ಜಲಾಯ, ಓಂ ಹಾಂ ಪೃಥ್ವೀತತ್ವಾಯನಮಃ || ಇತಿ ತತ್ವಾಧ್ವನ್ಯಾಸಃ ||

ಅಥ ಕದಾಕ್ಷ್ಯಪ್ರದಾರಿಕಾಯಾಂ ಮಂತ್ರಾಧ್ವನ್ಯಾಸಃ:—

ಓಂ ಹಾಂ ಹೃದಯಾಯನಮಃ | ಓಂ ಹಾಂ ಶಿರಸೇಸ್ವಾಹಾ | ಓಂ ಹಾಂ ಶಿಖಾಯೈವಷಟ್ | ಓಂ ಹಾಂ ಕವಚಾಯಹುಂ | ಓಂ ಹಾಂ ನೇತ್ರತ್ರಯಾಯವೌಷಟ್ | ಓಂ ಹಾಂ ಅಸ್ತ್ರಾಯಫಟ್ || ಓಂ ಹ್ರಾಂ ಸದ್ಯೋಜಾತಾಯನಮಃ | ಓಂ ಹ್ರೀಂ ವಾಮದೇವಾಯನಮಃ | ಓಂ ಹ್ರೂಂ ಅಘೋರಾಯನಮಃ | ಓಂ ಹ್ರೈಂ ತತ್ಪುರುಷಾಯನಮಃ | ಓಂ ಹ್ರಃ ಈಶಾನಾಯನಮಃ || ಇತಿ ಮಂತ್ರಾಧ್ವನ್ಯಾಸಃ.

ಏವಂ ಲಿಂಗೆ ಷಡಧ್ವನ್ಯಾಸಾನ್ ಕೃತ್ವಾ, ತಲ್ಲಿಂಗಂ ಗಂಧಪುಷ್ಪಾದಿಭಿಸ್ಸಂಪೂಜ್ಯ, ಅಷ್ಟತ್ರಿಂಶತ್ಕಲಾನ್ಯಾಸಂ ಕುರ್ಯಾತ್ || ತದ್ಯಥಾ:—

---

ಯಲ್ಲಿ ಊರ್ಧ್ವಮುಖಕಮಲದಂತಿರುವ ಪ್ರದೇಶದಲ್ಲಿಟ್ಟು, ಓಂ ಹಾಂ ಶಾಂತ್ಯತೀತ........ನಿವೃತ್ತಿಕಲಾಯೈನಮಃ ಎಂದು ಹೇಳಿ, ಕಲಾಧ್ವನ್ಯಾಸಮಾಡಿ, ಅನಂತರ ಆ ಕಮಲದಮೇಲಿರುವ ಸುತ್ತುಪಟ್ಟಿಯಲ್ಲಿ ದರ್ಭೆಯನ್ನಿಟ್ಟು, ಓಂ ಹಾಂ ಶಿವತತ್ವಾ..........ಪೃಥ್ವೀ ತತ್ವಾಯನಮಃ ಎಂದು ತತ್ವಾಧ್ವನ್ಯಾಸವಂ ಮಾಡುವುದು. ಅನಂತರ ಲಿಂಗದ ನಡುನತ್ತಿಯಲ್ಲಿ ದರ್ಭೆಯನ್ನಿಟ್ಟು, ಓಂ ಹ್ರಾಂ ಹೃದಯಾ........ಈಶಾನಾಯನಮಃ ಎಂದು ಮಂತ್ರಾಧ್ವನ್ಯಾಸವಂ ಮಾಡಿ, ಆ ಲಿಂಗವನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ, ೩೮ ಕಲೆಗಳ ನ್ಯಾಸವನ್ನು ಮಾಡ

(ಸಾಂಗುಷ್ಠತರ್ಜನ್ಯಾ ಲಿಂಗಂ ಸ್ಪೃಶೇತ್) ಈಶಾನಸ್ಸರ್ವವಿದ್ಯಾನಾಂ ನಮಃ—ಶಶಿನ್ಯೈನಮಃ—ಊರ್ಧ್ವಮೂರ್ಧ್ನಿ | ಈಶ್ವರಸ್ಸರ್ವಭೂತಾನಾಂನಮಃ—ಅಂಗದಾಯ್ಯೈನಮಃ—ಪೂರ್ವಮೂರ್ಧ್ನಿ | ಬ್ರಹ್ಮಾಧಿಪತಿ ರ್ಬ್ರಹ್ಮಣೋಧಿಪತಿರ್ಬ್ರಹ್ಮಾನಮಃ—ಇಷ್ಟದಾಯ್ಯೈನಮಃ—ದಕ್ಷಿಣಮೂರ್ಧ್ನಿ | ಶಿವೋಮೇಅಸ್ತುನಮಃ—ಮರೀಚ್ಯೈನಮಃ—ವಾಮಮೂರ್ಧ್ನಿ | ಸದಾಶಿವೋಂನಮಃ—ಜ್ವಾಲಿನ್ಯೈನಮಃ—ಪಶ್ಚಿಮಮೂರ್ಧ್ನಿ || ಅಥ (ಸಾಂಗುಷ್ಠಮಧ್ಯಮಯಾ) ತತ್ಪುರುಷಾಯವಿದ್ಮಹೇನಮಃ—ಶಾಂತ್ಯೈನಮಃ—ಪೂರ್ವವಕ್ತ್ರೇ | ಮಹಾದೇವಾಯಧೀಮಹಿನಮಃ—ವಿದ್ಯಾಯ್ಯೈನಮಃ—ದಕ್ಷಿಣವಕ್ತ್ರೇ | ತನ್ನೋರುದ್ರೋನಮಃ—ಪ್ರತಿಷ್ಠಾಯ್ಯೈನಮಃ—ವಾಮವಕ್ತ್ರೇ | ಪ್ರಚೋದಯಾನ್ನಮಃ—ನಿವೃತ್ಯೈನಮಃ—ಪಶ್ಚಿಮವಕ್ತ್ರೇ | (ಸಾಂಗುಷ್ಠಾನಾಮಿಕಯಾ) ಅಘೋರೇಭ್ಯೋನಮಃ—ಮೋಹಾಯ್ಯೈನಮಃ—ಕಂಠೇ | ಘೋರನಮಃ—ಜಯಾಯ್ಯೈನಮಃ—ದಕ್ಷಿಣಾಂಸೇ | ಘೋರತರೇಭ್ಯೋನಮಃ—ನಿದ್ರಾಯ್ಯೈನಮಃ—ವಾಮಾಂಸೇ | ಸರ್ವತಸ್ಸರ್ವನಮಃ—ಮೃತ್ಯವೇನಮಃ—ನಾಭೌ | ಸರ್ವೇಭ್ಯೋನಮಃ—ಮಾಯಾಯ್ಯೈನಮಃ—ಜಠರೇ | ನಮಸ್ತೇಅಸ್ತುನಮಃ-ಅಭಯಾಯ್ಯೈನಮಃ—ಪೃಷ್ಠೇ | ರುದ್ರರೂಪೇಭ್ಯಶ್ಶಿವೇಭ್ಯೋನಮಃ—ಜರಾಯ್ಯೈನಮಃ—ವಕ್ಷಸಿ (ಸಾಂಗುಷ್ಠಕನಿಷ್ಠಿಕಯಾ) ವಾಮದೇವಾಯನಮಃ—ವಿರಜಾಯ್ಯೈನಮಃ—ಗುಹ್ಯೇ | ಜ್ಯೇ

---

ಬೇಕು ಹೇಗೆಂದರೆ:—ಯಜಮಾನನು ತನ್ನ ಬಲಗೈಯ ಹೆಬ್ಬೆರಲನ್ನೂ ಅದರ ಮಗ್ಗುಲ ಬೆರಲನ್ನೂ ಸಹ ಸೇರಿಸಿ, ಲಿಂಗವನ್ನು ಸೋಂಕಿಸಿ, ಈಶಾನ......ಶಶಿನ್ಯೈನಮಃ ಎಂದು ಲಿಂಗದ ನಡುನೆತ್ತಿಯಲ್ಲೂ, ಈಶ್ವರ......ಅಂಗದಾಯ್ಯೈ ಎಂದು ಲಿಂಗದ ಪೂರ್ವದಿಕ್ಕಿರಸ್ಸಿನಲ್ಲೂ, ಬ್ರಹ್ಮಾಧಿ......ಇಷ್ಟದಾಯ್ಯೈ ಎಂದು ಬಲದ ಶಿರಸ್ಸಿನಲ್ಲೂ, ಶಿವೋಮೆ........ಮರೀಚ್ಯೈ ಎಂದು ಎಡನೆತ್ತಿಯಲ್ಲೂ, ಸದಾ....ಜ್ವಾಲಿನ್ಯೈ ಎಂದು ಹಿಂಗಡೆಯ ಶಿರಸ್ಸಿನಲ್ಲೂ ನ್ಯಾಸವಂ ಮಾಡಿ, ಅನಂತರ ಹೆಬ್ಬೆರಲನ್ನೂ ಮಧ್ಯದ ಬೆರಲನ್ನೂ ಸೇರಿಸಿ ತತ್ಪುರುಷಾ.......ಶಾಂತ್ಯೈ ಎಂದು ಪೂರ್ವದಿಕ್ಕಿನ ಮುಖದಲ್ಲೂ, ಮಹಾದೇವಾ ವಿದ್ಯಾಯ್ಯೈ...ಎಂದು ದಕ್ಷಿಣಮುಖದಲ್ಲಿಯೂ, ತನ್ನೊ....ಪ್ರತಿಷ್ಠಾಯ್ಯೈ ಎಂದು ಎಡಗಡೆಯ ಮುಖದಲ್ಲೂ, ಪ್ರಚೋದಯಾ....ನಿವೃತ್ಯೈ ಎಂದು ಹಿಂಗಡೆಯ ಮುಖದಲ್ಲೂ ನ್ಯಾಸಮಾಡಿ, ಅನಂತರ ಹೆಬ್ಬೆರಲನ್ನೂ, ಕಿರಿಬೆರಲಿನ ಮಗ್ಗುಲ ಬೆರಲನ್ನೂ ಸೇರಿಸಿ, ಅಘೋರೆ...ಶಾಮಸ್ಯೈ ಎಂದು ಹೃದಯದಲ್ಲೂ, ಅಥ ....ಮೋಹಾಯ್ಯೈ ಎಂದು ಕತ್ತಿನಲ್ಲೂ, ಘೋರ...ಜಯಾಯ್ಯೈ ಎಂದು ಬಲಭುಜ ಶಿರಸ್ಸಿನಲ್ಲೂ, ಘೋರತರೇ....ನಿದ್ರಾಯ್ಯೈ ಎಂದು ಎಡಭುಜ ಶಿರಸ್ಸಿನಲ್ಲೂ, ಸರ್ವ....ಮೃತ್ಯವೆ ಎಂದು

ಷ್ಠಾಯನಮಃ—ರಕ್ಷಾಯೈನಮಃ—ಲಿಂಗೇ | ಶ್ರೇಷ್ಠಾಯನಮೋ—ರತ್ಯೈನಮಃ | ದಕ್ಷಿಣೋರೌ | ರುದ್ರಾಯನಮಃ—ಪಾಲಿನ್ಯೈನಮಃ—ವಾಮೋರೌ | ಕಾಲಾಯನಮಃ—ಸಂಜ್ಞಾಯೈನಮಃ—ದಕ್ಷಿಣಜಾನುನಿ | ಕಲನಮಃ—ಕಾಲಾಯೈನಮಃ—ವಾಮಜಾನುನಿ | ವಿಕರಣಾಯನಮಃ—ಕ್ರಿಯಾಯೈನಮಃ—ದಕ್ಷಿಣಜಂಘಾಯಾಂ | ಬಲನಮಃ-ಬುದ್ಧ್ಯೈನಮಃ-ವಾಮಜಂಘಾಯಾಂ | ವಿಕರಣಾಯನಮಃ—ಜ್ಞಾನಾಯೈನಮಃ—ದಕ್ಷಿಣಸ್ಫಿಜಿ | ಬಲಾಯನಮಃ—ಧಾತ್ರ್ಯೈನಮಃ—ವಾಮಸ್ಫಿಜಿ | ಬಲಪ್ರಮಥನಾಯನಮಃ—ಭ್ರಾಮಿಣ್ಯೈನಮಃ—ಕಟ್ಯಾಂ | ಸರ್ವಭೂತದಮನಾಯನಮಃ—ಮೋಹಿನ್ಯೈನಮಃ—ದಕ್ಷಿಣಪಾರ್ಶ್ವೆ | ಮನೋನ್ಮನಾಯನಮಃ—ಅಭಯಾಯೈನಮಃ—ವಾಮಪಾರ್ಶ್ವೆ | (ಸರ್ವೈರಂಗುಲೀಭಿಃ) ಸದ್ಯೋಜಾತಂಪ್ರಪದ್ಯಾಮಿನಮಃ—ಸಿದ್ಧ್ಯೈನಮಃ—ದಕ್ಷಿಣಪಾದೆ | ಸದ್ಯೋಜಾತಾಯವೈನಮಃ—ಋದ್ಧ್ಯೈನಮಃ—ವಾಮಪಾದೆ | ಭವೇನಮಃ—ದ್ಯುತ್ಯೈನಮಃ—ದಕ್ಷಿಣಕರೆ | ಅಭವೇನಮಃ—ಲಕ್ಷ್ಮ್ಯೈನಮಃ—ವಾಮಕರೆ| ನಾತಿಭವೇನಮಃ—ಮೇಧಾಯೈನಮಃ—ಘ್ರಾಣೇ | ಭಜಸ್ವಮಾಂನಮಃ—ಕಾಂತ್ಯೈನಮಃ—ಶಿರಸಿ | ಭವನಮಃ—ಶ್ರದ್ಧಾಯೈನಮಃ—ದಕ್ಷಿಣಬಾಹೌ | ಉದ್ಭವಾಯನಮಃ—ಧೃತ್ಯೈನಮಃ—ವಾಮಬಾಹೌ | ಇತ್ಯಷ್ಟತ್ರಿಂಶತ್ಕಲಾನ್ಯಾಸಃ ||

---

ಹೊಕ್ಕುಳಿನಲ್ಲೂ, ಸರ್ವೇ....ಮಾಯಾಯೈ ಎಂದು ಹೊಟ್ಟೆಯಲ್ಲೂ, ನಮಸ್ತೆ....ಅಭಯಾಯೈ ಎಂದು ಬೆನ್ನಿನಲ್ಲೂ. ರುದ್ರ ....ಜರಾಯೈನಮಃ ಎಂದು ಎದೆಯಲ್ಲೂ ನ್ಯಾಸಮಾಡಿ, ಅನಂತರ ಹೆಬ್ಬೆರಳನ್ನೂ ಕಿರಿಬೆರಳನ್ನೂ ಸೇರಿಸಿ, ವಾಮ ....ವಿರಜಾಯೈ ಎಂದು ಗುಹ್ಯಸ್ಥಾನದಲ್ಲೂ, ಜ್ಯೇಷ್ಠಾ...ರಕ್ಷಾಯೈ ಎಂದು ಶಿಶ್ನಸ್ಥಲದಲ್ಲೂ, ಶ್ರೇಷ್ಠಾ ...ರತ್ಯೈ ಎಂದು ಬಲದೊಡೆಯಲ್ಲೂ, ರುದ್ರಾ....ಪಾಲಿನ್ಯೈ ಎಂದು ಎಡದೊಡೆಯಲ್ಲೂ, ಕಾಲಾ....ಸಂಜ್ಞಾಯೈ ಎಂದು ಬಲಮಣಿಕಾಲಿನಲ್ಲೂ, ಕಲ....ಕಾಲಾಯೈ ಎಂದು ಎಡ ಮಣಿಕಾಲಿನಲ್ಲೂ, ವಿಕರ....ಜ್ಞಾನಾಯೈ ಎಂದು ಬಲಪಾದದ ಹರಡಿನಲ್ಲೂ, ಬಲ...ಧಾತ್ರ್ಯೈ ಎಂದು ಎಡಪಾದದ ಹರಡಿನಲ್ಲೂ, ಬಲಪ್ರ...ಭ್ರಾಮಿಣ್ಯೈ ಎಂದು ನಡುವಿನಲ್ಲೂ, ಸರ್ವಭೂತ....ಮೋಹಿನ್ಯೈ ಎಂದು ಬಲಪಕ್ಕದಲ್ಲೂ, ಮನೋ....ಅಭಯಾಯೈ ಎಂದು ಎಡಪಕ್ಕದಲ್ಲೂ, ನ್ಯಾಸಮಾಡಿ, ಅನಂತರ ಐದು ಬೆರಳುಗಳನ್ನೂ ಸೇರಿಸಿ, ಸದ್ಯೋ....ಸಿದ್ಧ್ಯೈ ಎಂದು ಬಲಪಾದದಲ್ಲೂ, ಸದ್ಯೋಜಾತಾ....ಋದ್ಧ್ಯೈ ಎಂದು ಎಡಪಾದದಲ್ಲೂ, ಭವೇ....ದ್ಯುತ್ಯೈ ಎಂದು ಬಲಗಯ್ಯಲ್ಲೂ, ಅಭವೇ....ಲಕ್ಷ್ಮ್ಯೈ ಎಂದು ಎಡಗಯ್ಯಲ್ಲೂ, ನಾತಿ....ಮೇಧಾಯೈ ಎಂದು ಮೂಗಿನಲ್ಲೂ, ಭಜಸ್ವ....ಕಾಂತ್ಯೈ ಎಂದು ಶಿರಸ್ಸಿನಲ್ಲೂ, ಭವ...ಶ್ರದ್ಧಾಯೈ ಎಂದು ಬಲತೋಳಿನಲ್ಲೂ,

## ಕೌತುಕಬಂಧನಂ.

ತತೋ ಯಜಮಾನಃ ತಂಡುಲಪೂರಿತಪಾತ್ರೇ ಕೌತುಕಂ ನಿಕ್ಷಿಪ್ಯ, ಪ್ರಾಣಾನಾಯಮ್ಯ, ದೇಶಕಾಲಾವನುಕೀರ್ತ್ಯ, ,,ಶ್ವಃ ಕರಿಷ್ಯಮಾಣದೀಕ್ಷಾಕರ್ಮಾಂಗಭೂತ ಕೌತುಕಬಂಧನಂ ಕರಿಷ್ಯೇ'' ಇತಿ ಸಂಕಲ್ಪ್ಯ, ಕೌತುಕಂ ಷೋಡಶೋಪಚಾರೈಸ್ಸಂಪೂಜ್ಯ, ತ್ರಿಯಂಬಕಮಂತ್ರೇಣ ಭಸ್ಮನಾ ಸಮ್ಯಕ್ಸಮ್ಮೃಜ್ಯ, (ವಿಶ್ವೇತ್ತಾತೆ ಸವನೇಷು ಪ್ರವಾಚ್ಯಾಯಾಚಕತ್ಥಮಘವನ್ನಿಂದ್ರಸುನ್ವತಿ | ಪಾರಾವತಂ ಯತ್ಪುರುಸಂಭೃತಂವಸ್ವಪಾವೃಣೋಶ್ಶರಭಾಯ ಋಷಿಬಂಧವೇ,) ಇತಿ ಮಂತ್ರೇಣ ಕುಮಾರಸ್ಯ ದಕ್ಷಿಣಕರೇ ಬಧ್ನೀಯಾತ್.

### ಅಥ ದೀಕ್ಷಾ:—

ಪರೇದ್ಯುಃ—ಯಜಮಾನಃ ಕೃತನಿತ್ಯಕ್ರಿಯಃ ಕೃತಮಂಗಲಸ್ನಾನಮಲಂಕೃತಂ ಕುಮಾರಂ ಉಕ್ತಸ್ವಸ್ತಿವಾಚನ ಕೃತಕೌತುಕಬಂಧಂ ಆನೀಯ, ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ | ಅಸ್ಯ ಕುಮಾರಸ್ಯ ದೀಕ್ಷಾಂ ಕರ್ತುಂ ತತ್ಪ್ರಾಚ್ಯಾಂಗಭೂತಂ ವಾಪನಾದಿಕರಿಷ್ಯೇ, ಇತಿ ಸಂಕಲ್ಪ್ಯ, ಕುಮಾರಂ ಭದ್ರಪೀಠೋಪರಿ ಸಮುಪವೇಶ್ಯ, ಪೂರ್ವಾದಿ ಚತುರ್ದಿಕ್ಷು ಏಕೈಕಂ ಶಕೃತ್ಪಿಂಡಂ ನಿ

---

ಉಧ್ಭವಾ...ಧೃತ್ಯೈ ಎಂದು ಎಡತೋಳಿನಲ್ಲೂ, ಈ ರೀತಿ ಕಲಾನ್ಯಾಸವಂ ಮಾಡುವುದು. (ಲಿಂಗಮೂರ್ತಿಯಲ್ಲಿ ನ್ಯಾಸಮಾಡುವಾಗ್ಗೆ ಆಯಾ ಅವಯವಗಳನ್ನೆಲ್ಲಾ ಆಯಾ ಸ್ಥಾನದಲ್ಲಿ ಭಾವಿಸಿ ನ್ಯಾಸವಂ ಮಾಡಬೇಕು.)

### ಕಂಕಣವಂ ಧರಿಸುವ್ರದು

ಅನಂತರ ಯಜಮಾನನು ಅಕ್ಕಿಯಿಂದ ತುಂಬಿದ ಒಂದು ತಟ್ಟೆಯಲ್ಲಿ ಕಂಕಣವನ್ನಿರಿಸಿ, ಪ್ರಾಣಾಯಾಮವಂ ಮಾಡಿ, ಶ್ವಃಕರಿಷ್ಯ......ಕರಿಷ್ಯೆ ಎಂದು ಸಂಕಲ್ಪಿಸಿ, ಅದನ್ನು ಷೋಡಶೋಪಚಾರದಿಂದ ಪೂಜಿಸಿ, ತ್ರಿಯಂಬಕಂ ಎಂಬ ಮಂತ್ರದಿಂದ ಭಸ್ಮವನ್ನು ಚೆನ್ನಾಗಿ ಸವರಿ ವಿಶ್ವೇತ್ತಾತೆ ಎಂಬ ಮಂತ್ರದಿಂದ ಕುಮಾರನ ಬಲಗಯ್ಯಲ್ಲಿ ಕಟ್ಟುವುದು.

### ದೀಕ್ಷೆಯ ದಿವಸ ಮಾಡತಕ್ಕದು:—

ಯಜಮಾನನು ತನ್ನ ನಿತ್ಯಕ್ರಿಯೆಗಳನ್ನೆಲ್ಲಾ ನೆರವೇರಿಸಿಕೊಂಡು, ಸ್ನಾನಮಾಡಿ ಅಲಂಕೃತನಾಗಿರುವ ಕುಮಾರನನ್ನು ತನ್ನ ಮಗ್ಗುಲಲ್ಲಿ ಕುಳ್ಳಿರಿಸಿ, ಪ್ರಾಣಾಯಾಮವಂ ಮಾಡಿ, ದೇಶಕಾಲಗಳನ್ನು ಹೇಳಿ, ಈ ಕುಮಾರನಿಗೆ ದೀಕ್ಷೆಯನ್ನು ಮಾಡುವುದಕ್ಕೋಸ್ಕರ ಮೊದಲು ಅದಕ್ಕೆ ಅಂಗವಾದ ಕ್ಷೌರಕರ್ಮವಂ ಮಾಡಿಸುತ್ತೇನೆಂದು ಸಂಕಲ್ಪಿಸಿ, ಬೇರೊಂದುಕಡೆ ಪೀಠದ ಮೇಲೆ ವಟುವನ್ನು ಕುಳ್ಳಿರಿಸಿ, ಆತನಿಗೆ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲೂ ಒಂದೊಂದು ಸಗ

ಧಾಯ—(ಉಷ್ಣೇನವಾಯುವುದಕೇನೇಹ್ಯದಿತಿಃ ಕೇಶಾನ್ವಪತು| ಆಪಉದಂತು ಜೀವಸೇದೀರ್ಘಾಯುತ್ವಾಯವರ್ಚಸೇ ಜ್ಯೋಕ್ಚಸೂರ್ಯಂದೃಶೆ) ಇತಿ ಜಲೇನ ಶಿರಸ್ಸಮೃಜ್ಯ, ತ್ರೀನ್ ದರ್ಭಾನ್ ಪುರಸ್ತಾದಂತರ್ಧಾಯ, (ಯೇನಾವಪತ್ಸವಿತಾ ಕ್ಷುರೇಣ ಸೋಮಸ್ಯರಾಜ್ಞೋವರುಣಸ್ಯವಿದ್ವಾನ್. ತೇನಬ್ರಹ್ಮಣೋವಪತೇದ ಮಸ್ಯಾಯುಷ್ಮಾನ್ ಜರದಷ್ಟಿರ್ಯಥಾಸತ್ | ಅಯಮಸೌ ಶ್ಲೋಕ್ಯಾಯಸ್ವಸ್ತ ಯೇ | ಯತ್ಕ್ಷುರೇಣಮರ್ಚಯತಾಸುಪೇಶಸಾವಪ್ತಾವಪಸಿಕೇಶಾನ್ | ಶುಂ ಧಿಶಿರೋಮಾಸ್ಯಾಯುಃ ಪ್ರಮೋಷೀಃ) ಇತಿ ಪೂರ್ವತಃ ಕೇಶಾನ್ವಾಪಯಿತ್ವಾ| ತಾನ್ಕೇಶಾನ್ ಶಕೃತ್ಪಿಂಡೇ ನಿಧಾಯ | ಅಪಉಪಸ್ಪೃಶ್ಯ|| ತತಸ್ತ್ರೀನ್ ದರ್ಭಾನ್ ದ ಕ್ಷಿಣತೋಂತರ್ಧಾಯ, (ಯೇನಧಾತಾಬೃಹಸ್ಪತೇರಗ್ನೇರಿಂದ್ರಸ್ಯಚಾಯುಷೆವ ಪತ್| ತೇನತಆಯುಷೇವಪಾಮಿಸುಶ್ಲೋಕ್ಯಾಯಸ್ವಸ್ತಯೆ) ಇತಿ ದಕ್ಷಿಣತಃ ಕೇ ಶನ್ವಾಪಯಿತ್ವಾ ಪೂರ್ವವತ್ ಶಕೃತ್ಪಿಂಡೆನಿಧಾಯ, ಅಪಉಪಸ್ಪೃಶ್ಯ|| ತತಸ್ತ್ರೀನ್ ದರ್ಭಾನ್ ಪಶ್ಚಾದಂತರ್ಧಾಯ (ಯೇನಭೂಯಶ್ಚರಾತ್ಯಾಂ ಜ್ಯೋಕ್ಚಪಶ್ಯಾತಿ ಸೂರ್ಯಂ | ತೇನತಆಯುಷೇವಪಾಮಿಸುಶ್ಲೋಕ್ಯಾಯಸ್ವಸ್ತಯೇ) ಇತಿ ಕೇಶಾ ನ್ವಾಪಯಿತ್ವಾ, ಪೂರ್ವವತ್ಕೃತ್ವಾ ಅಪಉಪಸ್ಪೃಶ್ಯ,|| ತತಸ್ತ್ರೀನ್ ದರ್ಭಾನುತ್ತರ ತೋಂತರ್ಧಾಯ ಯೇನಾವಪದ್ಯೇನ ಧಾತಾಯೇನಭೂಯಶ್ಚೇತಿಪೂರ್ವೋಕ್ತ ಮಂತ್ರತ್ರಯೇಣ ಉತತ್ತರತಃ ಕೇಶಾನ್ವಾಪಯಿತ್ವಾ| ತಾನ್ ಕೇಶಾನ್ ಶಕೃತ್ಪಿಂ ಡೇನಿಧಾಯ ಅಪಉಪಸ್ಪೃಶ್ಯ|| ತತಃ ಕುಮಾರಸ್ಯಮಾತಾ ತದಭಾವೇ ವಟುರ್ವಾ (ಉಪ್ತ್ವಾಯಕೇಶಾನ್ವರುಣಸ್ಯ ರಾಜ್ಞೋಬೃಹಸ್ಪತಿಸ್ಸವಿತಾಸೊಮೋಅಗ್ನಿಃ ತೆ

---

ಣೆಯ ಉಂಡೆಯನ್ನು ಇಟ್ಟು, ಉಷ್ಣೇನ....ವರ್ಚಸೆ ಎಂದು ಹೇಳಿ, ತಲೆಗೆ ನೀರನ್ನು ಸವರಿಸಿ, ಮೂರು ದರ್ಭೆಗಳನ್ನು ಮುಂದಲೆಯಕಡೆ ಆಚ್ಛಾದಿಸಿ, ಯೇನಾ........ಪ್ರಮೋಷೀಃ ಎಂದು ಅಕಡೆ ಸ್ವಲ್ಪ ಕೂದಲನ್ನು ಕ್ಷೌರಮಾಡಿಸಿ, ಆ ತೆಗೆದ ಕೂದಲನ್ನು ಒಂದು ಸಗಣಿಯುಂಡೆಯ ಲ್ಲಿಟ್ಟು, ಕಯ್ತೊಳೆದು, ಅನಂತರ ಮತ್ತೆ ಮೂರು ದರ್ಭೆಗಳನ್ನು ಬಲದಲೆಯಕಡೆ ಆಚ್ಛಾದಿಸಿ, ಯೇನಧಾತಾ....ಸ್ವಸ್ತಯೆ ಎಂದು ಅಲ್ಲಿ ಸ್ವಲ್ಪ ಕೂದಲನ್ನು ಬೋಳಿಸಿಸಿ, ಮೊದಲಿನಂತೆಯೇ ಸೊಪ್ಪೆಯ ಉಂಡೆಯಲ್ಲಿಟ್ಟು ಕಯ್ತೊಳೆದು, ಬಳಿಕ ಇನ್ನು ಮೂರು ದರ್ಭೆಗಳನ್ನು ಹಿಂದಲೆಯ ಮೇಲೆ ಮರೆಮಾಡಿ, ಯೇನಭೂ....ಸ್ವಸ್ತಯೇ ಎಂದು ಸ್ವಲ್ಪ ಕೂದಲನ್ನು ತೆಗಿಸಿ, ಮೊದಲಿನಂ ತೆಯೇ ಮಾಡಿ, ಬಳಿಕ ಇನ್ನು ಮೂರು ದರ್ಭೆಗಳನ್ನು ಎಡದಲೆಯಮೇಲೆ ಆಚ್ಛಾದಿಸಿ, ಯೇನಾ ವಪತ್ ಮೊದಲಾದ ೩ ಮಂತ್ರಗಳನ್ನು ಹೇಳಿ ಕೂದಲನ್ನು ತೆಗಿಸಿ ಮೊದಲಿನಂತೆಯೇ ಮಾಡಿ ಅನಂತರ ಆ ಕುಮಾರನ ತಾಯಾಗಲಿ ಅವಳಿಲ್ಲದಿದ್ದರೆ ಅವನೇ ಆಗಲಿ ಉಪ್ತ್ವಾ.......ಸ್ನುವ

ಭ್ಯೋನಿಧಾಸಂ ಬಹುಧಾಸ್ವವಿಂದನ್ನಂತರಾದ್ಯಾವಾ ಪೃಥಿವೀ ಅಪಸ್ಸುವಃ) ಇತ್ಯುಕ್ತ್ವಾ, ತಾಂ ಕೇಶಾಂ ಉದುಂಬರಮೂಲೆ ದರ್ಭಸ್ತಂಬೆವಾ ನಿದಧೀತ ‖ (ಇಮಂಮೆ ಗಂಗೆಯಮುನೆ ಸರಸ್ವತಿ ಶುತುದ್ರಿಸ್ತೋಮಗ್ಂಸಚತಾಪರುಷ್ಣಾ ಅಸಿಕ್ನಿಯಾಮರುದ್ವೃಧೇ ವಿತಸ್ತಯಾರ್ಜೀಕೀಯೆ ಶೃಣುಹ್ಯಾಸುಷೋಮಯಾ‖ ಯನ್ಮಯಾಭುಕ್ತಮಸಾಧೂನಾಂ ಪಾಪೇಭ್ಯಶ್ಚ ಪ್ರತಿಗ್ರಹಃ | ಯನ್ಮೆಮನಸಾವಾಚಾ ಕರ್ಮಣಾವಾದುಷ್ಕೃತಂಕೃತಂ | ತನ್ಮೆ ಇಂದ್ರೋ ವರುಣೋ ಬೃಹಸ್ಪತಿ ಸ್ಸವಿತಾಚಪುನಂತು ಪುನಃಪುನಃ‖ ನಮೋಗ್ನಯೆಽಪ್ಸುಮತೆನಮ ಇಂದ್ರಾಯ ನಮೋವರುಣಾಯ ನಮೋವಾರುಣ್ಯೈ ನಮೋಽದ್ಭ್ಯಃಯದಪಾಂಕ್ರೂರಂ ಯದಮೇಧ್ಯಂ ಯದಶಾಂತಂ ತದಪಗಚ್ಛತಾತ್ | ಅತ್ಯಾಶನಾದತೀಪಾನಾ ದ್ಯಚ್ಚ ಉಗ್ರಾತ್ಪ್ರತಿಗ್ರಹಾತ್ | ತನ್ನೋವರುಣೋರಾಜಾ ಪಾಣಿನಾಹ್ಯವಮರ್ಶತ್ | ಸೋಹಮಪಾಪೋವಿರಜೋ ನಿರ್ಮುಕ್ತೋಮುಕ್ತಕಿಲ್ಬಿಷಃ | ನಾಕಸ್ಯಪೃಷ್ಠಮಾರುಹ್ಯಗಚ್ಛೇದ್ಬ್ರಹ್ಮಸಲೋಕತಾಂ | ಯಶ್ಚಾಪ್ಸುವರುಣಸ್ಸಪುನಾತ್ವಘಮರ್ಷಣಃ ‖) ಇತ್ಯಘಮರ್ಷಣಮಂತ್ರೈಃ ಕುಮಾರಂ ಸಮ್ಯಕ್ ಸ್ನಾಪಯೇತ್.

## ಮಂಟಪಪ್ರವೇಶಃ.

ಯಜಮಾನಃ ಸಭಾಪೂಜಾಂ ಕುರ್ಯಾತ್—(ನಮೋಮಹದ್ಭ್ಯಃ ಕ್ಷುಲ್ಲಕೇಭ್ಯಶ್ಚವೋ ನಮೋನಮಃ | ಗಣೇಭ್ಯೋ ಗಣಪತಿಭ್ಯಶ್ಚವೋ ನಮೋನಮಃ| ಸಭಾಭ್ಯಸ್ಸಭಾಪತಿಭ್ಯಶ್ಚವೊ ನಮೋನಮಃ | ಇತಿ ಸಭಾಸದಃ ಪೂಜಯೇತ್) ತತೋ ಭಸ್ಮ ತಾಂಬೂಲದಕ್ಷಿಣಾದಿ ದತ್ವಾತೈರನುಜ್ಞಾತೋ ಮಾಹೇಶ್ವರೈಸ್ಸಹ ಸಾಮಾನ್ಯಾರ್ಘ್ಯಹಸ್ತೋ ಮಂಟಪದ್ವಾರಾಣಿ ಅಸ್ತ್ರೇಣ ಸಂಪ್ರೋಕ್ಷ್ಯ, ಕವ

---

ಎಂದು ಹೇಳಿ, ಆ ಕೂದಲನ್ನೆಲ್ಲಾ ಅತ್ತಿಯ ಮರದ ಬುಡದಲ್ಲಾಗಲಿ, ದರ್ಭೆಯು ಬೆಳೆದಿರುವ ಸ್ಥಳದಲ್ಲಾಗಲಿ ಹಾಕಿಬಿಡಬೇಕು. ಅನಂತರ ಹುಡುಗನನ್ನು ಇಮಂಮೆ....ಅಘಮರ್ಷಣಃ ಎಂಬ ಮಂತ್ರಗಳಿಂದ ಚೆನ್ನಾಗಿ ಸ್ನಾನಮಾಡಿಸುವುದು.

ಯಜಮಾನನು ಸಭಿಕರಿಗೆ ದಕ್ಷಿಣಾ ತಾಂಬೂಲವನ್ನಿತ್ತು ನಮೋಮಹದ್ಭ್ಯಃ ಎಂದು ನಮಸ್ಕರಿಸಿ, ದೀಕ್ಷೆಮಾಡುವುದಕ್ಕೆ ಅವರಿಂದ ಅಪ್ಪಣೆಯಂ ಪಡೆದು, ಮಾಹೇಶ್ವರರೊಡನೆ ಸೇರಿ, ಕೈಯ್ಯಲ್ಲಿ ಸಾಮಾನ್ಯಾರ್ಘ್ಯವನ್ನು ಹಿಡಿದು, ದೀಕ್ಷಾಮಂಟಪದ ಬಾಗಿಲುಗಳನ್ನು ಓಂ ಶಿವಾಸ್ತ್ರಾಯಫಟ್ ಎಂಬ ಮಂತ್ರದಿಂದ ಸಂಪ್ರೋಕ್ಷಿಸಿ, ರಕ್ಷಣಕವಚದಿಂದಾಚ್ಛಾದಿಸಿ, ಓಂ ಹಾಂ

ಚೇನಾವಕುಂಠ್ಯ | ಓಂ ಹಾಂ ಶಾಂತಿಕಲಾದ್ವಾರಾಯನಮಃ ಇತಿ ಪೂರ್ವೆ || ಓಂ ಹಾಂ ವಿದ್ಯಾಕಲಾದ್ವಾರಾಯನಮಃ ದಕ್ಷಿಣೆ || ಓಂ ಹಾಂ ನಿವೃತ್ತಿ ಕಲಾದ್ವಾರಾಯನಮಃ ಪಶ್ಚಿಮೆ || ಓಂ ಹಾಂ ಪ್ರತಿಷ್ಠಾ ಕಲಾದ್ವಾರಾಯನಮಃ ಉತ್ತರೆ || ಇತಿ ಸಂಪೂಜ್ಯ, ತಚ್ಛಾಖಯೋಃ ದಕ್ಷಿಣವಾಮಯೋಃ ಪೂರ್ವಾದಾರಭ್ಯ—ಓಂ ಹಾಂ ನಂದಿನೇನಮಃ | ಓಂ ಹಾಂ ಮಹಾಕಾಳಾಯನಮಃ || ದಕ್ಷಿಣೆ—ಓಂ ಹಾಂ ಭೃಂಗಿನೇನಮಃ | ಓಂ ಹಾಂ ವಿನಾಯಕಾಯ ನಮಃ || ಪಶ್ಚಿಮೆ—ಓಂ ಹಾಂ ವೃಷಭಾಯನಮಃ | ಓಂ ಹಾಂ ಸ್ಕಂದಾಯ ನಮಃ || ಉತ್ತರೆ—ಓಂ ಹಾಂ ದೇವ್ಯೈನಮಃ | ಓಂ ಹಾಂ ಚಂಡಾಯನಮಃ| ಇತಿ ಪ್ರತಿದ್ವಾರಂ ದ್ವೌದ್ವೌ ಧ್ಯಾನಪುರಸ್ಸರಂ ಸಂಪೂಜ್ಯ || ಯಜಮಾನಃ ದಿವ್ಯದೃಷ್ಟ್ಯಾ ಅವಲೋಕನಾತ್ ದಿವ್ಯಾನ್ವಿಘ್ನಾನ್, ಓಂಹ್ರಃ ಅಸ್ತ್ರಾಯಫಡಿತಿ ಪುಷ್ಪಂಕ್ಷಿಪ್ತ್ವಾ ಅಂತರಿಕ್ಷ ಗಾನ್ ವಿಘ್ನಾನ್, ಪಾಶುಪತಾಸ್ತ್ರೇಣ ದಕ್ಷಿಣ ಪಾದಪಾರ್ಷ್ಣಿಘಾತೈಸ್ತ್ರಿಭಿಃ ಭೂಮಿಷ್ಠಾನ್ ಇತಿ ತ್ರಿವಿಧಾನ್ವಿಘ್ನಾನ್ ಯಾಗ ಗೃಹಾದುದ್ವಾಸ್ಯ, ಸುಗಂಧಾದಿನಾ ಧೂಪಯಿತ್ವಾ, ಲಾಜಾಚಂದನಸಿದ್ಧಾರ್ಥ ಭಸ್ಮ ಪುಷ್ಪಕುಶಾಕ್ಷತಾನ್ ವಾ ಶುದ್ಧಲಾಜಾನ್ವಾ ಅಸ್ತ್ರಾಯಫಟ್ ಇತಿವಿಕೀರ್ಯ, "ಚೈತನ್ಯಂ ಶಾಶ್ವತಂಶಾಂತಂ ವ್ಯೋಮಾತೀತಂ ನಿರಂಜನಂ | ನಾದಬಿಂದುಕಲಾತೀತಂ ಯಸ್ತಸ್ಮೈ ಗುರವೇನಮಃ || ಬ್ರಹ್ಮಾವಿಷ್ಣುಶ್ಚರುದ್ರಶ್ಚ ಈಶ್ವರ

---

ಶಾಂತಿ....ನಮಃ ಎಂದು ಪೂರ್ವದಲ್ಲೂ, ಓಂ ಹಾಂ ವಿದ್ಯಾ....ನಮಃ ಎಂದು ದಕ್ಷಿಣದಲ್ಲೂ, ಓಂ ಹಾಂ ನಿವೃತ್ತಿ....ನಮಃ ಎಂದು ಪಶ್ಚಿಮದ್ವಾರದಲ್ಲೂ, ಓಂ ಹಾಂ ಪ್ರತಿಷ್ಠಾ....ನಮಃ ಎಂದು ಉತ್ತರದಲ್ಲೂ ಪೂಜಿಸಿ, ಪೂರ್ವಾದಿಯಾದ ದಿಕ್ಕುಗಳಲ್ಲಿ ಮೊದಲು ಬಲಗಡೆ; ಆಮೇಲೆ ಎಡಗಡೆ; ಈ ರೀತಿಯಾಗಿ ಪೂರ್ವದಲ್ಲಿ ಓಂ ಹಾಂ ನಂದಿನೆ....ಮಹಾಕಾಳಾಯ ಎಂತಲೂ, ಪಶ್ಚಿಮದಲ್ಲಿ ವೃಷಭಾ...ಸ್ಕಂದಾಯ ಎಂತಲೂ, ಉತ್ತರದಲ್ಲಿ ದೇವ್ಯೈ....ಚಂಡಾಯ ಎಂತಲೂ, ಪ್ರತಿ ಬಾಗಿಲಿನಲ್ಲೂ ಇಬ್ಬಿಬ್ಬರನ್ನು ಎರಡೆರಡು ಕಡೆಯಲ್ಲಿ ಧ್ಯಾನಪೂರ್ವಕವಾಗಿ ಆವಾಹಿಸಿ ಪೂಜಿಸಿ, ಜ್ಞಾನದೃಷ್ಟಿಯಿಂದ ನಿರೀಕ್ಷಿಸಿ, ಓಂ ಹ್ರಃ ಅಸ್ತ್ರಾಯಫಟ್ ಎಂದು ಹೂವನ್ನೆ ಚಚಿ ಅಂತರಿಕ್ಷಗತಗಳಾದ ವಿಘ್ನಗಳನ್ನೂ, ಓಂ ಶ್ಲೀಂ ಪಶುಫಟ್ ಎಂಬ ಪಾಶುಪತಾಸ್ತ್ರ ಮಂತ್ರದಿಂದ ಮೂರಾವೃತ್ತಿ ಬಲಗಾಲಿನ ಹಿಮ್ಮಡದಿಂದ ಭೂಮಿಯನ್ನು ಒದೆದು, ಭೂಗತಗಳಾದ ವಿಘ್ನಗಳನ್ನೂ ಸಹ ದೀಕ್ಷಾಮಂಟಪದಿಂದ ಹೊರಕ್ಕೆ ಹೊರಡಿಸಿ, ಸುಗಂಧಾದಿಗಳಿಂದ ಧೂಪವನ್ನು ಹಾಕಿ, ಬತ್ತದ ಅರಳು, ಶ್ರೀಗಂಧದ ಪತ್ರೆ, ಬಿಳೀ ಸಾಸುವೆ, ಭಸ್ಮ, ಹೂವು, ದರ್ಭೆ ಅಕ್ಷತೆ ಇವುಗಳನ್ನಾಗಲಿ ಅಥವಾ ಬರಿಯ ಬತ್ತದ ಅರಳನ್ನಾಗಲಿ ಅಸ್ತ್ರಾಯಫಟ್ ಎಂದು ಮಂಟಪದಮೇಲೆ ಎರಚಿ, ಚೈತನ್ಯಂಶಾಶ್ವತಂ ಎಂಬ ಮಂತ್ರದಿಂದ ಮಂಟಪವನ್ನು

ಶ್ಚ ಸದಾಶಿವಃ| ಏತೇಗರ್ಭಜಾಯುಸ್ಯ ತಸ್ಮೈ ಶ್ರೀಗುರವೇನಮಃ,, ಇತಿ ಮಂಟ
ಪಂ ತ್ರಿಃ ಪ್ರದಕ್ಷಿಣೀಕೃತ್ಯ, ಮಂಗಳತೂರ್ಯೈರ್ದಕ್ಷಿಣಪಾದಪುರಸ್ಸರಂ ಮಂಟ
ಪಸ್ಯ ಪಶ್ಚಿಮದ್ವಾರೇಣ ಕಿಂಚಿದ್ವಾಮಶಾಖಾಂ ಸಮಾಶ್ರಯ್ಯ ಅಂತಃಪ್ರವಿಶ್ಯ
ವೇದಿಕಾಯಾಂ ಕಲಶಸ್ಥಾಪನಸ್ಯ ಪಶ್ಚಿಮಭಾಗೇ ಕಿಂಚಿದ್ದಕ್ಷಿಣಭಾಗಮಾಶ್ರಿತ್ಯ
ಪ್ರಾಙ್ಮುಖಸ್ಸನ್ ಚಿತ್ರಾಸನಾದೌ ಸಪತ್ನೀಕಉಪವಿಶ್ಯ, ಇಷ್ಟದೇವತಾಗುರ್ವಾ
ದೀನ್ನಮಸ್ಕೃತ್ವಾ, ಮೌಹೂರ್ತಿಕೋಕ್ತೇ ಶುಭೇ ಮುಹೂರ್ತೇ ಕೃತವಾಪಸ್ನಾಪಿತಂ
ಬದ್ಧಶಿಖಂ ಕುಮಾರಂ (ಧ್ರುವಂತೇ ರಾಜಾ ವರುಣೋ ಧ್ರುವಂತೇವೋ ಬೃ
ಹಸ್ಪತಿಃ | ಧ್ರುವಂತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂಧಾರಯಿತಾಧ್ರುವಂ) ಇತಿ
ಸ್ವದಕ್ಷಿಣಭಾಗೇ ಸಮುಪವೇಶ್ಯ, ತಸ್ಮುಖಂ ಸಮ್ಯಗೀಕ್ಷ್ಯ, ತತೋತ್ರಿಗಣಾನ್
ಶ್ವೇತಾದೀನ್ ಧ್ಯಾಯೇತ್ || ತದ್ಯಥಾ—ವೃಷರಾಜೋಮಹಾತೇಜಾ ಮಹಾ
ಮೇಘಸಮಸ್ವನಃ | ಮೇರುಮಂದರಕೈಲಾಸ ಹಿಮಾದ್ರಿಶಿಖರೋಪಮಃ | ಸಿತಾ
ಭ್ರಶಿಖರಾಕಾರಕಕುದಾಪರಿಶೋಭಿತಃ | ಮಹಾಭೋಗೀಂದ್ರಕಲ್ಪೇನ ವಾಲೇ
ನಚ ವಿರಾಜಿತಃ | ರಕ್ತಾಸ್ಯಶೃಂಗಚರಣೋ ರಕ್ತಪ್ರಾಯವಿಲೋಚನಃ | ಪೀವ
ರೋನ್ನತಸರ್ವಾಂಗ ಸ್ಸುಚಾರುಗಮನೋಜ್ವಲಃ | ಪ್ರಶಸ್ತಲಕ್ಷಣಶ್ರೀಮಾನ್
ಪ್ರಜ್ವಲನ್ಮಣಿಭೂಷಣಃ | ಶಿವಪ್ರಿಯಶ್ಶಿವಾಸಕ್ತ ಶ್ಶಿವಯೋರ್ಧ್ವಜವಾಹನಃ |
ತಥಾತಚ್ಚರಣನ್ಯಾಸ ಪಾವಿತಾಪರವಿಗ್ರಹಃ | ಗೋರಾಜಪುರುಷ ಶ್ಶ್ರೀಮಾನ್
ಶ್ರೀಮಚ್ಛೂಲವರಾಯುಧಃ | ತಯೋರಾಜ್ಞಾಂಪುರಸ್ಕೃತ್ಯ ಸಮೇಕಾಮಂ
ಪ್ರಯಚ್ಛತು ||೧|| ಸಂದೀಶ್ವರೋಮಹಾತೇಜಾ ನಗೇಂದ್ರತನಯಾತ್ಮಜಃ | ಸ
ನಾರಾಯಣಕೈರ್ದೇವೈ ರ್ನಿತ್ಯಮಭ್ಯರ್ಚ್ಯವಂದಿತಃ | ಶರ್ವಸ್ಯಾಂತಃಪುರದ್ವಾ
ರೇಸಾರ್ಧಂ ಪರಿಜನೈಸ್ಸ್ಥಿತಃ| ಸರ್ವೇಶ್ವರಸಮಪ್ರಖ್ಯಸ್ಸರ್ವಾಸುರವಿಮರ್ದನಃ |

---

ಮೂರುವೇಳೆ ಪ್ರದಕ್ಷಿಣೆಮಾಡಿ, ಮಂಗಳವಾದ್ಯವಾಗುತ್ತಿರಲಾಗಿ ಬಲಗಾಲು ಮುಂದಾಗಿ ಪಶ್ಚಿಮದಿಕ್ಕಿನ ಬಾಗಿಲಿಂದ ಎಡಗಡೆಯ ಭಾಗವನ್ನೇ ನೆಮ್ಮಿ ಮಂಟಪವಂ ಪ್ರವೇಶಿಸಿ, ದೀಕ್ಷಾ ವೇದಿಕೆಯಲ್ಲಿ ಕಲಶಸ್ಥಾಪನಸ್ಥಲದ ಪಶ್ಚಿಮಭಾಗದಲ್ಲಿ ಸ್ವಲ್ಪ ಬಲಭಾಗವನ್ನಾಶ್ರೈಸಿ, ಪೂ ರ್ವಾಭಿಮುಖನಾಗಿ, ಚಿತ್ರಾಸನ ಮುಂತಾದುದರಲ್ಲಿ ಪತ್ನೀಸಮೇತನಾಗಿ ಕುಳಿತು, ಇಷ್ಟದೇ ವತೆಯನ್ನೂ ಗುರುಹಿರಿಯರನ್ನೂ ನಮಸ್ಕರಿಸಿ, ಸ್ನಾನದಿಂದ ಶುದ್ಧನಾಗಿ ಜುಟ್ಟನ್ನು ಕಟ್ಟಿ ಕೊಂಡಿರುವ ದೀಕ್ಷೆಯಾಗತಕ್ಕ ಕುಮಾರನನ್ನು ಶುಭಮುಹೂರ್ತದಲ್ಲಿ ಮಂಟಪವಂ ಪ್ರವೇಶ ಗೊಳಿಸಿ, ಧ್ರುವಂತೆ ಎಂಬ ಮಂತ್ರದಿಂದ ತನ್ನ ಬಲಭಾಗದಲ್ಲಿ ಕುಳ್ಳಿರಿಸಿ, ಆತನ ಮುಖವನ್ನು ಚೆನ್ನಾಗಿ ನೋಡಿ, ಅನಂತರ ಗಣಸಂತತಿಯನ್ನು ವೃಷರಾಜೋ....ತ್ಸ್ಮರಾಮ್ಯಹಂ ಎಂದು

ಸರ್ವೇಷಾಂ ಶಿವಧರ್ಮಾಣಾ ಮಧ್ಯಕ್ಷತ್ವೇಽಭಿಷೇಚಿತಃ| ಶಿವಪ್ರಿಯಶ್ಶಿವಾಸಕ್ತ ಶ್ಶ್ರೀಮಚ್ಛೂಲವರಾಯುಧಃ | ಶಿವಾಶ್ರಿತೇಷುಸಂಸಕ್ತಸ್ತ್ವನುರಕ್ತಸ್ತುತೈರಪಿ| ಸತ್ಕೃತ್ಯಶಿವಯೋರಾಜ್ಞಾಂ ಸಮೇಕಾಮಂಪ್ರಯಚ್ಛತು ||೨|| ಭೃಂಗೀಶೋ ನಾಮಗಣಪಶ್ಶಿವಾರಾಧನತತ್ಪರಃ | ಪ್ರಯಚ್ಛತು ಸಮೇಕಾಮಂಭರ್ತುರಾಜ್ಞಾ ಪುರಸ್ಸರಂ ||೩|| ವೀರಭದ್ರೋಮಹಾತೇಜಾ ಹಿಮಕುಂದೇಂದುಸನ್ನಿಭಃ| ಭದ್ರ ಕಾಳೀಪ್ರಿಯೋನಿತ್ಯಂ ಮಾತೃಣಾಂಚಾಭಿರಕ್ಷಕಃ | ಯಜ್ಞಸ್ಯಚಶಿರೋಹರ್ತಾ ದಕ್ಷಸ್ಯಚದುರಾತ್ಮನಃ | ಉಪೇಂದ್ರೇಂದ್ರಯಮಾದೀದಾಂ ದೇವಾನಾಮಂಗತ ಕ್ಷಕಃ | ಶಿವಸ್ಯಾನುಚರಶ್ಶ್ರೀಮಾಂಚ್ಛಿವಶಾಸನಪಾಲಕಃ | ಶಿವಯೋಶ್ಶಾಸನಾ ದೇವಸಮೇದಿಶತುವಾಂಛಿತಂ ||೪|| ರುದ್ರಾರುದ್ರಸಮಪ್ರಖ್ಯಾಃ ಪ್ರಮಥಾಃ ಪ್ರ ಥಿತೌಜಸಃ | ಭೂತಾಖ್ಯಾಶ್ಚ ಮಹಾವೀರ್ಯಾ ಮಹಾದೇವಸಮಪ್ರಭಾಃ | ನಿ ತ್ಯಮುಕ್ತಾ ನಿರುಪಮಾನಿರ್ದ್ವಂದ್ವಾ ನಿರುಪಪ್ಲವಾಃ | ಸಶಕ್ತಯಸ್ಸಾನುಚರಾ ಸ್ಸರ್ವಲೋಕನಮಸ್ಕೃತಾಃ | ಶಿವಪ್ರಿಯತಮಾನಿತ್ಯಂ ಶಿವಲಕ್ಷಣಲಕ್ಷಿತಾಃ| ವಿರೂಪಾಶ್ಚ ಸುರೂಪಾಶ್ಚ ನಾನಾವೇಷಧರಾಸ್ತಥಾ | ಸತ್ಕೃತ್ಯಶಿವಯೋರಾ ಜ್ಞಾಂಮೇಪ್ರಯಚ್ಛಂತುವಾಂಛಿತಂ ||೫|| ಇತಿ ಶಿವಗಣಾನ್ಸ್ಮೃತ್ವಾ, ಪ್ರಾ ಣಾನಾಯಮ್ಯ, ದೇಶಕಾಲಾವನುಕೀರ್ತ್ಯ, ಏವಂಗುಣವಿಶಿಷ್ಟಾಯಾಂ ಶುಭತಿ ಥೌ "ಅಸ್ಯಕುಮಾರಸ್ಯ ಆಣವಾದಿಮಲತ್ರಯಾಪನೋದನ ಮಾಯಾಪಾಶವಿ ಚ್ಛೇದನೋಭಯಪೂರ್ವಕ ಶಿವಲಿಂಗಧಾರಣಪೂಜನ ಯೋಗ್ಯತಾಸಿದ್ಧಿದ್ವಾರಾ ದ್ವಿಜತ್ವಸಿದ್ಧ್ಯಾ ವೇದಾಧ್ಯಯನಾಧಿಕಾರಾರ್ಥಂ ಪುನರಾವೃತ್ತಿರಹಿತಶಾಶ್ವತ ಶಿವಸಾಯುಜ್ಯಸಿದ್ಧ್ಯರ್ಥಂ ಏನಂ....ಗೋತ್ರೋತ್ಪನ್ನಂ....ಶರ್ಮಾಣಂ ಮಾಣವ ಕಂ ವೇಧಾ ಮನು ಕ್ರಿಯಾತ್ಮಕ ಶಿವದೀಕ್ಷಾಕರ್ಮಣಾ ಸಂಸ್ಕರಿಷ್ಯೇ, ತದಾದೌ ಶಿಷ್ಯ ಸ್ಯ ಸ್ನಪನಾರ್ಥಂ ಈಶಾನಾದಿಪಂಚಕಲಶಸ್ಥಾಪನಂಕರಿಷ್ಯೇ" ಇತಿ ಸಂಕಲ್ಪ್ಯ–

---

ಸ್ಮರಿಸಿ, ಪ್ರಾಣಾಯಾಮವಂ ಮಾಡಿ, ದೇಶಕಾಲಗಳನ್ನು ಹೇಳಿ, ಈ ಕುಮಾರನಿಗೆ ಆಣವಮಾ ಯಾಕಾರ್ಮಿಕವೆಂಬ ಮಲತ್ರಯವನ್ನೂ ಮಾಯಾಪಾಶವನ್ನೂ ನಾಶಮಾಡಿ, ಶಿವಲಿಂಗಧಾರಣ ಪೂಜನಗಳನ್ನು ಮಾಡತಕ್ಕ ಅರ್ಹತೆಯುಂಟಾಗುವುದರ ಮೂಲಕ ದ್ವಿಜತ್ವಸಿದ್ಧಿಯಾಗಿ ವೇದಾ ಧ್ಯಯನವನ್ನು ಮಾಡತಕ್ಕ ಅಧಿಕಾರವನ್ನುಂಟುಮಾಡುವುದಕ್ಕಾಗಿಯೂ, ಶಾಶ್ವತ ಶಿವಸಾಯು ಜ್ಯಪ್ರಾಪ್ತಿಗಾಗಿಯೂ ಈ ಹೆಸರಿನ ಈ ವಟುವನ್ನು ವೇಧಾ ಮನು ಕ್ರಿಯಾ ಎಂಬ ತ್ರಿವಿಧ ದೀ ಕ್ಷಾಕರ್ಮದಿಂದ ಸಂಸ್ಕರಿಸುತ್ತೇನೆ. ಮೊದಲು ಈ ಶಿಷ್ಯನಿಗೆ ಸ್ನಾನಮಾಡಿಸುವುದಕ್ಕಾಗಿ ಪಂಚ ಕಲಶಸ್ಥಾಪನವನ್ನು ಮಾಡುತ್ತೇನೆ ಎಂದು ಸಂಕಲ್ಪಿಸಿ,

## ಪಂಚಕಲಶಸ್ಥಾಪನಂ.

ಮಂಟಪಮಧ್ಯೇ ಈಶಾನದಿಶಿವಾ ಭೂಮಿಂ ಗೋಮಯೇನೋಪಲಿಪ್ಯ, ರಂಗವಲ್ಲ್ಯಾ ಪಂಚಕೋಣಾನ್ ತನ್ಮಧ್ಯೇ ಅಷ್ಟದಳಕಮಲಪಂಚಕಂಚ ವಿಲಿಖ್ಯ; ತತ್ರ (ಮಹೀದ್ಯೌಃ ಪೃಥಿವೀಚನಇಮಂಯಜ್ಞಂಮಿಮಿಕ್ಷತಾಂ| ಪಿಪೃತಾನ್ನೋ ಭರೀಮಭಿಃ) ಇತಿ ಭೂಮಿಂ ಸ್ಪೃಷ್ಟ್ವಾಜಪೇತ್ (ಓಷಧಯಸ್ಸಂವದಂತೆಸೋಮೇನಸಹರಾಜ್ಞಾ | ಯಸ್ಮೈಕೃಣೋತಿಬ್ರಾಹ್ಮಣಸ್ತಗ್ಂರಾಜನ್ಪಾರಯಾಮಸಿ) ಇತಿ ಪ್ರತಿಕಲಶಂ ದ್ವಿಪ್ರಸ್ಥಧಾನ್ಯಂ ಪದ್ಮೇಷು ದದ್ಯಾತ್ | ತದುಪರಿ ತದರ್ಧತಂಡುಲಂ, ತದುಪರಿ ತದರ್ಧತಿಲಂ ದದ್ಯಾತ್ | ತತ್ರ (ಆಕಲಶೇಷುಧಾವತಿ ಶ್ಯೇನೋವರ್ಮವಿದಾಹತೆ | ಅಭಿದ್ರೋಣಾಕನಿಕ್ರದತ್) ಇತಿ ಸೌವರ್ಣಾದ್ಯನ್ಯತಮಕಲಶಾನ್ನಿದಧ್ಯಾತ್ (ಇಮಂಮೆ ಗಂಗೆಯಮುನೇಸರಸ್ವತಿ | ಶುತುದ್ರಿಸ್ತೋಮಗ್ಂಸಚತಾಪರುಷ್ಣ್ಯಾ| ಅಸಿಕ್ನ್ಯಾಮರುದ್ವೃಧೆ ವಿತಸ್ತಯಾರ್ಜೀಕೀಯೆ ಶೃಣುಹ್ಯಾಸುಷೋಮಯಾ, (ಆಪೋವಾಇದಗ್ಂಸರ್ವಂ ವಿಶ್ವಾಭೂತಾನ್ಯಾಪಃ ಪ್ರಾಣಾವಾಆಪಃಪಶವಆಪಃ ಸಮ್ರಾಡಾಪೋ ವಿರಾಡಾಪಃ ಸ್ವರಾಡಾಪಃ ಛಂದಾಗ್ಂಸ್ಯಾಪಃ ಜ್ಯೋತೀಗ್ಂಷ್ಯಾಪೋ ಯಜೂಗ್ಂಷ್ಯಾಪೋ ಸತ್ಯಮಾಪಃ ಸರ್ವದೇವತಾಆಪಃ ಭೂರ್ಭುವಸ್ಸುವರಾಪ ಓಂ) ಇತಿ ಮಂತ್ರಾಭ್ಯಾಂ ತೀರ್ಥೋದಕಮಭಿಮಂತ್ರ್ಯ, ಈಶಾನಾದಿಸದ್ಯೋಜಾತಾಂತಮಂತ್ರೇಣ ಕಲಶೇಷು ಜಲಂ ಪೂರಯೇತ್ (ಗಂಧದ್ವಾರಾಂದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ | ಈಶ್ವರೀಗ್ಂಸರ್ವಭೂತಾನಾಂ ತಾಮಿಹೋಪಹ್ವಯೇಶ್ರಿಯಂ) ಇತಿ ಕಲಶೇಷು ಶಿವಾಷ್ಟಗಂಧಂ ನಿದದ್ಯಾತ್ (ಕಾಂಡಾತ್ಕಾಂಡಾತ್ಪ್ರರೋಹಂ

---

### ಪಂಚಕಲಶಸ್ಥಾಪನವು.

ಮಂಟಪದ ಮಧ್ಯದಲ್ಲಾಗಲಿ ಈಶಾನ ದಿಕ್ಕಿನಲ್ಲಾಗಲಿ ಗೋಮಯದಿಂದ ಮಂಡಲವಾಗಿ ಭೂಮಿಯನ್ನು ಸಾರಿಸಿ, ರಂಗವಲ್ಲಿಯಿಂದ ಐದು ಕೋಣವಾಗುವಂತೆಯೂ, ಅದರ ಮಧ್ಯೆ ಅಷ್ಟದಳ ಕಮಲಗಳನ್ನೂ ಬರೆದು, ಅಲ್ಲಿ ಮಹೀ... ಮಭಿಃ ಎಂದು ಭೂಮಿಯನ್ನು ಸ್ಪರ್ಶಿಸಿ, ಅಲ್ಲಿ ಓಷಧ ...ಮಸಿ, ಎಂದು ಒಂದೊಂದು ಕಲಶಕ್ಕೆ ಎರಡೆರಡು ಕೊಳಗದ ಮೇರೆ ಬತ್ತವನ್ನು ಸುರಿದು, ಅದರ ಮೇಲೆ ಬತ್ತದ ಅರ್ಧದಷ್ಟು ಅಕ್ಕಿಯನ್ನೂ, ಅದರ ಮೇಲೆ ಅಕ್ಕಿಯ ಅರ್ಧದಷ್ಟು ಎಳ್ಳನ್ನೂ ಹಾಕಿ, ಅದರ ಮೇಲೆ ಆಕ....ಕ್ರದತ್ ಎಂದು ಚಿನ್ನವೇ ಮುಂತಾದ ಲೋಹದ ಕಲಶಗಳನ್ನೈದನ್ನು ಇಟ್ಟು, ಅದರಲ್ಲಿ ಇಮಂಮೆ..., ಆಪಓಂ. ಎಂದು ತೀರ್ಥ

ತಿಪರುಷಃಪರುಷಃಪರಿ | ಏವಾನೋದೂರ್ವೆಪ್ರತನು ಸಹಸ್ರೇಣಶತೇನಚ) ಇತಿ ಪಂಚಪಲ್ಲವಪಂಚತ್ವಗ್ದೂರ್ವಾಂಕ್ಷುದದ್ಯಾತ್ (ಸ್ಯೋನಾಪೃಥಿವಿನೋಭವಾನೃಕ್ಷರಾನಿವೇಶಿನೀ | ಯಚ್ಛಾನಶ್ಶರ್ಮಸಪ್ರಥಾಃ) ಇತಿ ಪವಿತ್ರಪಂಚಮೃತ್ತಿಕಾಃ ನಿಕ್ಷಿಪೇತ್ (ಸಹಿರತ್ನಾನಿದಾಶುಷೇಸುವಾತಿಸವಿತಾಭಗಃ | ತಂಭಾಗಂಚಿತ್ರಮೀಮಹೇ) ಇತಿ ಪಂಚರತ್ನಾನಿ ನಿಕ್ಷಿಪೇತ್ (ಹಿರಣ್ಯರೂಪಸ್ಸಹಿರಣ್ಯಸಂದೃಗಪಾನ್ನಪಾತ್ಸೇದುಹಿರಣ್ಯವರ್ಣಃ | ಹಿರಣ್ಯಯಾತ್ಪರಿಯೋನೇರ್ನಿಷದ್ಯಾಹಿರಣ್ಯಂದಾದತ್ಯಂನಮಸ್ಮೈ) ಇತಿ ಸುವರ್ಣಪ್ರತಿಮಾಂ ದದ್ಯಾತ್ | (ಪೂರ್ಣಾದರ್ವಿಪರಾಪತ ಸುಪೂರ್ಣಾ ಪುನರಾಪತ ವಸ್ನೇವವಿಕ್ರೀಣಾವಹ ಇಷಮೂರ್ಜಗ್ಂ ಶತಕ್ರತೊ) ಇತಿ ಫಲಂ ದಧ್ಯಾತ್ (ಯುವಾಸುವಾಸಾಃ ಪರಿವೀತಆಗಾತ್ಸಉಶ್ರೇಯಾನ್ಭವತಿಜಾಯಮಾನಃ | ತಂಧೀರಾಸ್ಸಕವಯಉನ್ನಯಂತಿಸ್ವಾಧಿಯೊಮನಸಾದೇವಯಂತಃ) ಇತಿ ವಸ್ತ್ರಂದಧ್ಯಾತ್ (ತಂತುಂತನ್ವನ್ರಜಸೋಭಾನುಮನ್ವಿಹಿ | ಜ್ಯೋತಿಷ್ಮತಃ ಪಥೋರಕ್ಷಧಿಯಾಕೃತಾನ್ | ಅನುಲ್ಬಣಂವಯತಜೋಗುವಮಪೋಮನುರ್ಭವಜನಯಾದೈವ್ಯಂಜನಂ) ಇತಿ ಶ್ವೇತತಂತುಭಿರ್ವೇಷ್ಟಯೇತ್ | (ಪವಿತ್ರಂತೆವಿತತಂ ಬ್ರಹ್ಮಣಸ್ಪತೆ ಪ್ರಭುರ್ಗಾತ್ರಾಣಿಪರ್ಯೇಷಿವಿಶ್ವತಃ | ಅತಪ್ತತನೂರ್ನತದಾಮೋಅಶ್ನುತೇ | ಶೃತಾಸಇದ್ವಹಂತಸ್ತತ್ಸಮಾಶತ) ಇತಿ ದರ್ಭಕೂರ್ಚಂದಧ್ಯಾತ್ (ಯಾಃಫಲಿನೀರ್ಯಾಅಫಲಾಅಪುಷ್ಪಾಯಾಶ್ಚಪುಷ್ಪಿಣೀಃ ಬೃಹಸ್ಪತಿಪ್ರಸೂತಾಸ್ತಾನೊಮುಂಚಂತ್ವಗ್ಂಹಸಃ) ಇತಿ ಪೂಗಪುಷ್ಪಫಲಾನಿ ದಧ್ಯಾತ್ | ಇತಿ ಪಂಚಕಲಶಾನಲಂಕೃತ್ಯ, ತತ್ತತ್ಕಲಶಪೂಜಾರ್ಥಂ ಋತ್ವಿಜೋವೃಣೀಯಾತ್ ||

---

ಜಲವನ್ನಭಿಮಂತ್ರಿಸಿ, ಈಶಾನಾದಿ ಮಂತ್ರದಿಂದ ಆಯಾ ಕಲಶವಂ ತುಂಬಿ, ಗಂಧ....ಶ್ರಿಯಂ ಎಂದು ಅಷ್ಟಗಂಧವಂ ಧರಿಸಿ, ಕಾಂಡಾ ...ಶತೇನಚ ಎಂದು ಐದುತರದ ಚಿಗುರು ಚಕ್ಕೆ ಗರುಕೆಗಳನ್ನು ಸಹ ಧರಿಸಿ, ಸ್ಯೋನಾ....ಸಪ್ರಥಾಃ ಎಂದು ಪರಿಶುದ್ಧವಾದ ಐದು ಮಣ್ಣು ಹೆಂಟೆಯನ್ನು ಇಟ್ಟು, ಸಹಿ ...ಮಹೆ ಎಂದು ಐದು ರತ್ನಗಳನ್ನಿಟ್ಟು, ಹಿರಣ್ಯ .. ನಮಸ್ಮೈ ಎಂದು ಐದು ಚಿನ್ನದ ಪ್ರತಿಮೆಗಳನ್ನ ವುಗಳಲ್ಲಿಟ್ಟು, ಪೂರ್ಣಾದರ್ವಿ ಎಂಬ ಮಂತ್ರದಿಂದ ಕಲಶಗಳಮೇಲೆ ತೆಂಗಿನ ಕಾಯಿಗಳನ್ನಿಟ್ಟು, ಯುವಾ....ಯಂತಃ ಎಂದು ವಸ್ತ್ರಗಳಂ ಧರಿಸಿ, ತಂತುಂ ..ವ್ಯಂಜನಂ ಎಂದು ಬಿಳಿಯ ನೂಲಿನಿಂದ ಸುತ್ತಿ, ಪವಿತ್ರಂ....ಶತ, ಎಂದು ದರ್ಭಕೂರ್ಚಗಳನ್ನಿಟ್ಟು, ಯಾಃ ...ಹಸಃ ಎಂದು ಅಡಕೆಯ ಹೊಂಬಾಳೆಯಿಂದಲಂಕರಿಸಿ, ಅನಂತರ ಕಲಶಗಳ ಪೂಜೆಗೋಸ್ಕರ ಋತ್ವಿಕ್ಕುಗಳನ್ನು ವರಿಸಬೇಕು. ಹೇಗಂದರೆ—

## ಋತ್ವಿಗ್ವರಣಂ.

ಯಜಮಾನಃ ಪ್ರಾಣಾನಾಯಮ್ಯ, ಏವಂಗುಣವಿಶಿಷ್ಟಾಯಾಮಸ್ಯಾಂ ಶುಭತಿಥೌ ಅಮುಕಗೋತ್ರಾಯಾಮುಕನಾಮ್ನೇ ಕುಮಾರಾಯ ಕರಿಷ್ಯಮಾಣ ದೀಕ್ಷಾಕರ್ಮಪ್ರಯುಕ್ತ ಪಂಚಕಲಶಪೂಜಾರ್ಥಂ ಋತ್ವಿಜೋ ವರಿಷ್ಯೇ, ಇತಿಸಂಕಲ್ಪ್ಯ || ಮಧ್ಯೇ—ಈಶಾನಕಲಶಪೂಜಾರ್ಥಂ ಈಶಾನಮುಖೋದ್ಭೂತಂ ಗುರುಂ ತ್ವಾಂ ವೃಣೀಮಹೇ || ಓಂ ನಮೋಭಗವತೇ ಆಗಮಾಧ್ಯಯನಾಯ, ಶುದ್ಧಸ್ಫಟಿಕವರ್ಣಾಯ, ಈಶಾನಮುಖೋದ್ಭೂತಾಯ, ಮಧ್ಯಮಕಲಶಾಧೀಶ್ವರಾಯ, ಲಿಂಗಯಜ್ಞೋಪವೀತಿನೇ, ಶಿವಲಾಂಛನಧಾರಕಾಯ, ಅಪರಿಮಿತಭಕ್ತಗಣಾಧೀಶ್ವರಾಯ, ಚಿನ್ಮುದ್ರಾಂಕಿತಾಯ, ಅತ್ಯಾಶ್ರಮಾಯ, ಷಟ್ಕೃತಿಪ್ರಣವಜಾಪಕಾಯ, ಅಪರಿಮಿತಶಿಖಾಯ, ಕ್ರಿಯಾಕಂಥಾಯ, ಜ್ಞಾನದಂಡಾಯ, ಕಾರುಣ್ಯಮೂರ್ತಯೇನಮಃ, ಇತಿ ಋತ್ವಿಜಂ ಪೂಜಯಿತ್ವಾ, ತನ್ಮುಖೇನ ಗುರುಕಲಶಪೂಜಾಂ ಕಾರಯೇತ್ || ಅಥ ಪೂರ್ವಸ್ಯಾಂ ದಿಶಿ—ತತ್ಪುರುಷ ಕಲಶಪೂಜಾರ್ಥಂ ತತ್ಪುರುಷಮುಖೋದ್ಭೂತಂ ರೇವಣಸಿದ್ಧಂ ತ್ವಾಂ ವೃಣೀಮಹೆ || ಓಂ ನಮೋಭಗವತೆ ರೇವಣಸಿದ್ಧಾಯ, ಸಾಮಶಾಖಾಧ್ಯಯನಾಯ, ಅರುಣವರ್ಣಾಯ, ತತ್ಪುರುಷಮುಖೋದ್ಭೂತಾಯ, ಪೂರ್ವಕಲಶಾಧೀಶ್ವರಾಯ, ಲಿಂಗಯಜ್ಞೋಪವೀತಿನೆ, ಶಿವಲಾಂಛನಧಾರಕಾಯ, ದ್ವಾದಶಸಹಸ್ರಚರಲಿಂಗಾಧ್ಯಕ್ಷಾಯ, ಶಿವಪಂಚಾಕ್ಷರೀಜಾಪಕಾಯ, ಷಟ್ತ್ರಿಂಶಜ್ಜಟಾಮುಕುಟಮುಂಡಿತಾಯ, ನೃತ್ತಕಂಥಾಯ, ಬಿಲ್ವದಂಡಾಯ, ಘನಲಿಂಗಾಯ ನಮೋನಮಃ, ಗಂ

---

ಯಜಮಾನನು ಪ್ರಾಣಾಯಾಮವಂ ಮಾಡಿ ದೇಶಕಾಲಗಳನ್ನು ಹೇಳಿ, [ ] ಗೋತ್ರೋತ್ಪನ್ನನಾದ [ ] ಹೆಸರುಳ್ಳ ಕುಮಾರನಿಗೆ ಈಗ ಮಾಡತಕ್ಕ ದೀಕ್ಷೆಯ ಪ್ರಯುಕ್ತ ಪಂಚಕಲಶವಂ ಪೂಜಿಸುವುದಕ್ಕಾಗಿ ಋತ್ವಿಕ್ಕುಗಳನ್ನು ವರಿಸುತ್ತೇನೆಂದು ಸಂಕಲ್ಪಿಸಿ, ಅನಂತರ ಈಶಾನಮುಖೋದ್ಭೂತ ಗುರುಪರಂಪರಾಗತರೊಬ್ಬರನ್ನು ಕುರಿತು ಮಧ್ಯದಲ್ಲಿರುವ ಈಶಾನ ಕಲಶಪೂಜೆಯನ್ನು ಮಾಡುವುದಕ್ಕೋಸ್ಕರ ಈಶ್ವರನ ಈಶಾನಮುಖದಿಂದುತ್ಪನ್ನರಾದ ಗುರುವನ್ನಾಗಿ ನಿಮ್ಮನ್ನು ವರಿಸುತ್ತೇನೆಂದು ಹೇಳಿ ಓಂನಮೋ....ಮೂರ್ತಯೇನಮಃ ಎಂದು ಅವರ ಹಸ್ತವಂ ಹಿಡಿದು ವರಿಸುವುದು. ಅವರಿಂದ ಈಶಾನಕಲಶಪೂಜೆಯಂ ಮಾಡಿಸುವುದು. ಬಳಿಕ ಪೂರ್ವದಿಕ್ಕಿನಲ್ಲಿರುವ ತತ್ಪುರುಷ ಕಲಶಪೂಜೆಯನ್ನು ಮಾಡುವುದಕ್ಕಾಗಿ ತತ್ಪುರುಷ ಮುಖೋದ್ಭೂತರಾದ ರೇವಣಸಿದ್ಧರನ್ನಾಗಿ ತಮ್ಮನ್ನು ವರಿಸುತ್ತೇನೆಂದು ರೇಣುಕಗೋತ್ರೋತ್ಪನ್ನರೊಬ್ಬರನ್ನು ಕುರಿತು ಹೇಳಿ, ಓಂನಮೋ....ಲಿಂಗಾಯನಮೋನಮಃ, ಎಂದು

ಧಾದ್ಯುಪಚಾರಾಂಸ್ತಸ್ಯ ಕೃತ್ವಾ, ತನ್ಮುಖೇನ ತತ್ಪುರುಷಕಲಶಪೂಜಾಂ ಕಾರಯೇತ್ ॥ ಅಥ ದಕ್ಷಿಣದಿಶಿ—ಅಘೋರಕಲಶಪೂಜಾರ್ಥಂ ಅಘೋರಮುಖೋದ್ಭೂತಂ ಮರುಳಸಿದ್ಧಂ ತ್ವಾಂ ವೃಣೀಮಹೆ ॥ ಓಂ ನಮೋಭಗವತೆ ಮರುಳಸಿದ್ಧಾಯ, ಅಥರ್ವಶಿಖಾಧ್ಯಯನಾಯ, ಶ್ಯಾಮವರ್ಣಾಯ, ಅಘೋರಮುಖೋದ್ಭೂತಾಯ, ದಕ್ಷಿಣಕಲಶಾಧೀಶ್ವರಾಯ, ಲಿಂಗಯಜ್ಞೋಪವೀತಿನೇ, ಶಿವಲಾಂಛನಧಾರಕಾಯ, ಷಟ್ಸಹಸ್ರಚರಲಿಂಗಾಧ್ಯಕ್ಷಾಯ, ದಯಾಧರ್ಮಭಿಕ್ಷಾಂದೇಹೀತಿಮುದ್ರಾಂಕಿತಾಯ, ವಾನಪ್ರಸ್ಥಾಶ್ರಮಾಯ, ಓಂ ನಮೋಹಂಸಾಯೇತಿಜಾಪಕಾಯ, ಏಕಾದಶಜಟಾಮುಕುಟಮಂಡಿತಾಯ, ವ್ಯಾಘ್ರಕಂಥಾಯ, ಔದುಂಬರದಂಡಾಯ, ಅತೀತಾಯ ನಮೋನಮಃ, ಇತಿ ಋತ್ವಿಜಂ ಪೂಜಯಿತ್ವಾ ತನ್ಮುಖೇನ ಅಘೋರಕಲಶಪೂಜಾಂ ಕಾರಯೇತ್ ॥ ಅಥ ಉತ್ತರದಿಶಿ—ವಾಮದೇವಕಲಶಪೂಜಾರ್ಥಂ ಪಂಡಿತಾಚಾರ್ಯಂ ತ್ವಾಂ ವೃಣೀಮಹೆ ॥ ಓಂ ನಮೋ ಭಗವತೇ ಪಂಡಿತಾಚಾರ್ಯಾಯ, ಯಜುರ್ವೇದಾಧ್ಯಯನಾಯ, ಪ್ರವಾಳವರ್ಣಾಯ, ವಾಮದೇವಮುಖೋದ್ಭೂತಾಯ, ಉತ್ತರಕಲಶಾಧೀಶ್ವರಾಯ, ಲಿಂಗಯಜ್ಞೋಪವೀತಿನೇ, ಶಿವಲಾಂಛನಧಾರಕಾಯ, ಅಸಂಖ್ಯಾತಚರಲಿಂಗಾಧ್ಯಕ್ಷಾಯ, ಭವತೀಭಿಕ್ಷಾಂದೇಹೀತಿ ಮುದ್ರಾಂಕಿತಾಯ, ಬ್ರಹ್ಮಚರ್ಯಾಶ್ರಮಾಯ, ಗಾಯತ್ರೀಜಾಪಕಾಯ, ಪಂಚಶಿಖಾಯ, ಸ್ವರ್ಣಕಂಥಾಯ, ಪಾಲಾಶದಂಡಾಯ, ಬ್ರಹ್ಮಚಾರಿಣೇ ನಮೋನಮಃ, ಇತಿ ಋತ್ವಿಜಂ ಪೂಜಯಿತ್ವಾ ತನ್ಮುಖೇನ ಉತ್ತರದಿಕ್ಕಲಶಪೂಜಾಂ ಕಾರಯೇತ್॥ ಅಥ ಪಶ್ಚಿಮದಿಶಿ— ಸದ್ಯೋಜಾತಕಲಶಪೂಜಾರ್ಥಂ ಸದ್ಯೋಜಾತಮುಖೋದ್ಭೂತಂ ಏಕೋರಾಮದೇವಂ ತ್ವಾಂ ವೃಣೀಮಹೇ ॥ ಓಂ ನಮೋಭಗವತೇ ಏಕೋರಾಮದೇವಾಚಾರ್ಯಾಯ, ಋಕ್ಶಾಖಾಧ್ಯಯನಾಯ, ಗೋಕ್ಷೀರವರ್ಣಾ

---

ಅವರನ್ನು ಪೂಜಿಸುವುದು. ಅನಂತರ ದಕ್ಷಿಣದಿಕ್ಕಿನಲ್ಲಿರುವ ಅಘೋರ ಕಲಶವನ್ನು ಪೂಜಿಸುವ ದಕ್ಕೋಸ್ಕರ ಅಘೋರ ಮುಖೋತ್ಪನ್ನ ಮರುಳಸಿದ್ಧರನ್ನಾಗಿ ತಮ್ಮನ್ನು ವರಿಸುತ್ತೇನೆಂದು ದಾರುಕಗೋತ್ರೋತ್ಪನ್ನರೊಬ್ಬರನ್ನು ಕುರಿತು ಹೇಳಿ, ಓಂನಮೋ....ಅತೀತಾಯನಮೋನಮಃ ಎಂದು ಪೂಜಿಸುವುದು. ಬಳಿಕ ಉತ್ತರದಿಕ್ಕಿನಲ್ಲಿರುವ ವಾಮದೇವಕಲಶವನ್ನು ಪೂಜಿಸುವುದಕ್ಕಾಗಿ ವಾಮದೇವಮುಖೋತ್ಪನ್ನರಾದ ಪಂಡಿತಾಚಾರ್ಯರನ್ನಾಗಿ ತಮ್ಮನ್ನು ವರಿಸುತ್ತೇನೆಂದು ಪಂಡಿತಾಚಾರ್ಯಗೋತ್ರೋತ್ಪನ್ನರೊಬ್ಬರನ್ನು ಕುರಿತು ಹೇಳಿ, ಓಂನಮೋ....ಬ್ರಹ್ಮಚಾರಿಣೇ ನಮೋನಮಃ ಎಂದು ಪೂಜಿಸುವುದು. ಅನಂತರ ಪಶ್ಚಿಮದಿಕ್ಕಿನಲ್ಲಿರುವ ಸದ್ಯೋ

ಯ, ಸದ್ಯೋಜಾತಮುಖೋದ್ಭೂತಾಯ, ಪಶ್ಚಿಮಕಲಶಾಧೀಶ್ವರಾಯ, ಲಿಂಗ ಯಜ್ಞೋಪವೀತಿನೆ, ಶಿವಲಾಂಛನಧಾರಕಾಯ, ತ್ರಿಸಹಸ್ರಚರಲಿಂಗಾಧ್ಯಕ್ಷಾಯ, ಲಿಂಗಾರ್ಪಿತಭಿಕ್ಷಾಂದೇಹೀತಿ ಮುದ್ರಾಂಕಿತಾಯ, ವಿರಕ್ತಾಶ್ರಮಾಯ, ಪ್ರಣವಮಂತ್ರಜಾಪಕಾಯ, ಏಕಶಿಖಾಯ, ಕಾರ್ಪಾಸಕಂಥಾಯ, ವೇಣುದಂಡಾಯ, ವಿರಕ್ತಾಶ್ರಮಾಯ ನಮೋನಮಃ, ಇತಿ ಋತ್ವಿಜಂ ಪೂಜಯಿತ್ವಾ ತನ್ಮುಖೇನ ಸದ್ಯೋಜಾತಕಲಶಪೂಜಾಂ ಕಾರಯೇತ್ ||

## ಅಥ ಕಲಶಪೂಜಾ:—

ಮಧ್ಯೇ-ಈಶಾನಕಲಶಪೂಜಾಂಕರಿಷ್ಯೇ:-ತದಂಗತ್ವೇನ ಪ್ರಾಣಪ್ರತಿಷ್ಠಾಪನಂಕರಿಷ್ಯೆ || ಈಶಾನಪ್ರಾಣಪ್ರತಿಷ್ಠಾಪನಮಂತ್ರಸ್ಯ ಬ್ರಹ್ಮರ್ಷಿಃ | ಬೃಹತೀಛಂದಃ | ಈಶಾನೊ ದೇವತಾ | ಈಶಾನಇತಿಬೀಜಂ | ಈಶ್ವರೀತಿಶಕ್ತಿಃ | ಸದಾಶಿವೋಮಿತಿಕೀಲಕಂ | ಈಶಾನಪ್ರಾಣಪ್ರತಿಷ್ಠಾರ್ಥೆ ಜಪೇ ವಿನಿಯೋಗಃ || ಈಶಾನಸ್ಸರ್ವವಿದ್ಯಾನಾಂ ಅಂಗುಷ್ಠಾಭ್ಯಾಂನಮಃ | ಈಶ್ವರಸ್ಸರ್ವಭೂತಾನಾಂ ತರ್ಜನೀಭ್ಯಾಂನಮಃ | ಬ್ರಹ್ಮಾಧಿಪತಿಃ ಮಧ್ಯಮಾಭ್ಯಾಂನಮಃ | ಬ್ರಹ್ಮಣೋಧಿಪತಿಃ ಅನಾಮಿಕಾಭ್ಯಾಂನಮಃ | ಬ್ರಹ್ಮಾ ಶಿವೋಮೇ ಅಸ್ತು ಕನಿಷ್ಠಿಕಾಭ್ಯಾಂನಮಃ | ಸದಾಶಿವೋಂ ಕರತಲಕರಪೃಷ್ಠಾಭ್ಯಾಂನಮಃ || ಈಶಾನಸ್ಸರ್ವವಿದ್ಯಾನಾಂ ಹೃದಯಾಯನಮಃ | ಈಶ್ವರಸ್ಸರ್ವಭೂತಾನಾಂ ಶಿರಸೇಸ್ವಾಹಾ | ಬ್ರಹ್ಮಾಧಿಪತಿಃ ಶಿಖಾಯೈವಷಟ್ | ಬ್ರಹ್ಮಣೋಧಿಪತಿಃ ಕವಚಾಯಹುಂ | ಬ್ರಹ್ಮಾ ಶಿವೋಮೇ ಅಸ್ತು ನೇತ್ರತ್ರಯಾಯವೌಷಟ್ | ಸದಾಶಿವೋಂ ಅಸ್ತ್ರಾಯಫಟ್ | ಭೂರ್ಭುವಸ್ಸುವರೋಮಿತಿದಿಗ್ಬಂಧಃ || ಧ್ಯಾನಂ || ವ್ಯಕ್ತಾವ್ಯಕ್ತ ಸನಾತನಂಚ ಪರಮಂ ಷಟ್ತ್ರಿಂಶತತ್ತ್ವಾತ್ಮಕಂ ತಸ್ಮಾದುತ್ತರತತ್ವಮಕ್ಷರಮಿತಿ

---

ಜಾತಕಲಶವಂ ಪೂಜಿಸುವುದಕ್ಕಾಗಿ ಸದ್ಯೋಜಾತಮುಖೋತ್ಪನ್ನರಾದ ಏಕೋರಾಮದೇವರನ್ನಾಗಿ ತಮ್ಮನ್ನು ವರಿಸುತ್ತೇನೆಂದು ಏಕೋರಾಮ ಸಂಪ್ರದಾಯಾನುಗತರೊಬ್ಬರನ್ನು ಕುರಿತು ಹೇಳಿ, ಅವರನ್ನು ಓಂನಮೋ........ವಿರಕ್ತಾಶ್ರಮಾಯನಮೋನಮಃ ಎಂದು ಪೂಜಿಸುವುದು. ಈ ಋತ್ವಿಕ್ಕುಗಳ ಮೂಲಕ ಆಯಾ ಕಲಶಪೂಜೆಯಂ ಮಾಡಿಸಬೇಕು.

## ಕಲಶಾರ್ಚನೆ.

ಈಶಾನ ಕಲಶಪೂಜೆಗಾಗಿ ವರಿಸಲ್ಪಟ್ಟಿರುವ ಋತ್ವಿಜರು ತಾವು ಪ್ರಾಣಾಯಾಮವಂ ಮಾಡಿ, ಈಶಾನ ಕಲಶಪೂಜೆಯನ್ನು ಮಾಡುತ್ತೇನೆಂದು ಸಂಕಲ್ಪಿಸಿ. ಈಶಾನ...ವಿನಿಯೋಗಃ

ಜ್ಞೇಯಂ ಸದಾ ಯೋಗಿಭಿಃ || ಓಂಕಾರಾದಿಸಮಸ್ತಮಂತ್ರಜನಕಂ ಸೂಕ್ಷ್ಮಾತಿ ಸೂಕ್ಷ್ಮಾತ್ಪರಂ ವಂದೇ ಪಂಚಮವಿಾಶ್ವರಸ್ಯ ವದನಂ ಖವ್ಯಾಪ್ತತೇಜೋಮಯಂ || (ಈಶಾನಸ್ಸರ್ವವಿದ್ಯಾನಾಂ ಈಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿರ್ಬ್ರಹ್ಮಾ ಶಿವೋಮೇ ಅಸ್ತುಸದಾಶಿವೋಂ) ಈಶಾನಸ್ಯ-ಪ್ರಾಣಾ ಇಹಪ್ರಾಣಾ ಈಶಾನಸ್ಯ ಜೀವಇಹಸ್ಥಿತಃ ಈಶಾನಸ್ಯಸರ್ವೇಂದ್ರಿಯಾಣಿ ಕಾಯವಾಙ್ಮನಶ್ಚಕ್ಷುಶ್ರೋತ್ರ ಜಿಹ್ವಾಘ್ರಾಣಪ್ರಾಣಾ ಇಹೈವಾಗತ್ಯ ಸುಖಂ ಚಿರಂತಿಷ್ಠಂತುಸ್ವಾಹಾ || ಪ್ರಸಾದಲಿಂಗಾಯನಮಃ | ಶ್ರೋತ್ರೇಂದ್ರಿಯಾತ್ಮನೇನಮಃ | ಶರಣಸ್ಥಲಸ್ವರೂಪಾಯನಮಃ | ಶಾಂತ್ಯತೀತಕಲಾತ್ಮನೇನಮಃ | ಶಬ್ದಗ್ರಹಣಸಾಧನಾಯನಮಃ | ಪರಾಶಕ್ತ್ಯೈನಮಃ | ಶಿವಸಾದಾಖ್ಯಾತ್ಮನೇ ನಮಃ | ಈಶಾನಮೂರ್ತಯೇನಮಃ | ಸಾನ್ನಿಧ್ಯಂಕುರುಕುರುಸ್ವಾಹಾ | ಸಪ್ತಮುದ್ರಾಃಪ್ರದರ್ಶ್ಯ || ಸದ್ಯೋಜಾತಂಪ್ರದದ್ಯಾವಿಾತ್ಯಾಸನಂ | ಸದ್ಯೋಜಾತಾಯವೈನಮಃ ಇತಿ ಪಾದ್ಯಂ | ಭವೇಭವೇನಾತಿಭವೇ ಇತ್ಯರ್ಘ್ಯಂ | ಭವೋದ್ಭವಾಯನಮ ಇತ್ಯಾಚಮನೀಯಂ | ವಾಮದೇವಾಯನಮ ಇತಿ ಸ್ನಾನಂ | ಜ್ಯೇಷ್ಠಾಯನಮ ಇತಿ ವಸ್ತ್ರಂ | ಶ್ರೇಷ್ಠಾಯನಮ ಇತ್ಯುತ್ತರೀಯಂ | ರುದ್ರಾಯನಮ ಇತಿ ಗಂಧಂ | ಕಾಲಾಯನಮ ಇತ್ಯಕ್ಷತಾನ್ | ಕಲವಿಕರಣಾಯನಮ ಇತಿ ಪುಷ್ಪಂ | ಬಲವಿಕರಣಾಯನಮ ಇತಿ ಧೂಪಂ | ಬಲಾಯನಮ ಇತಿ ದೀಪಂ | ಬಲಪ್ರಮಥನಾಯನಮ ಇತಿ ಶಾಲೀ ನೈವೇದ್ಯಂ | ಸರ್ವಭೂತದಮನಾಯನಮ ಇತಿ ಪ್ರದಕ್ಷಿಣಾದ್ಯುಪಚಾರಾನ್ ಕೃತ್ವಾ | ಮೂಲಮಂತ್ರಮಷ್ಟೋತ್ತರಶತಂ ಜಪೇತ್ ||

ಅಥ ಪೂರ್ವದಿಶಿ:—ತತ್ಪುರುಷಕಲಶಪೂಜಾಂ ಕರಿಷ್ಯೇ ತದಂಗತ್ವೇನ ಪ್ರಾಣಪ್ರತಿಷ್ಠಾಪನಂ ಕರಿಷ್ಯೇ || ಅಸ್ಯ ಶ್ರೀತತ್ಪುರುಷಪ್ರಾಣಪ್ರತಿಷ್ಠಾಪನಮಂತ್ರಸ್ಯ ಬ್ರಹ್ಮರ್ಷಿಃ | ಗಾಯತ್ರೀಛಂದಃ | ತತ್ಪುರುಷೋದೇವತಾ | ತದ್ಬೀಜಂ | ಮ

---

ಎಂದು ಹೇಳಿ, ಈಶಾನಸ್ಸರ್ವವಿದ್ಯಾನಾಂ....ಅಸ್ತ್ರಾಯಫಟ್ ಎನ್ನುವವರೆಗೂ ಹೇಳಿ ನಂತರ ಕರನ್ಯಾಸಾದಿಗಳಂ ಮಾಡಿ, ವ್ಯಕ್ತಾ....ತೇಜೋಮಯಂ ಎಂದು ಧ್ಯಾನಿಸಿ, ಈಶಾನ....ಸ್ವಾಹಾ ಎಂದು ಈಶಾನಮೂರ್ತಿಯನ್ನು ಆವಾಹಿಸಿ, ಪ್ರಸಾದ....ಸ್ವಾಹಾ ಎಂದು ಹೇಳಿ, ಸಪ್ತಮುದ್ರೆಗಳಂ ಪ್ರದರ್ಶನಮಾಡಿ, ಸದ್ಯೋಜಾತಂ ಎಂದಾರಂಭಿಸಿ, ಸರ್ವಭೂತದಮನಾಯನಮಃ ಎಂಬುವವರೆಗೆ ಇರುವ ಆಯಾ ಮಂತ್ರಗಳಿಂದ ಆಯಾ ಉಪಚಾರಗಳಂ ಕ್ರಮವಾಗಿ ಮಾಡಿ, ೧೦೮ ಸಲ ಮೂಲಮಂತ್ರವನ್ನು ಜಪಿಸುವುದು. ಬಳಿಕ ತತ್ಪುರುಷ ಕಲಶಪೂಜೆ

